೨-ನೆಯವಳು—ಸಖಿ! ಹೌದು! ಆಗ ಇಂದ್ರಸಭೆಯಲ್ಲಿ ನಾರದನೂ, ಈಗ ಪರ್ವತನೂ, ಆ ಮನ್ಮಥನ ಮೇಲಿನ ಕೋಪದಿಂದ ನಮ್ಮನ್ನೇನು ಮಾಡುವನೋ ಎಂದು ನನಗೂ ಬಹಳ ಭಯವಾಗಿದ್ದಿತು. ದೈವಾಧೀನವಾಗಿ ಈ ಎರಡು ಗಂಡಗಳೂ ತಪ್ಪಿದುವು. ಮುಂದೆ ಇನ್ನೇನನರ್ಥವಾಗುವುದೋ! ಆದರಿಂದ ನಾವು ಬೇರೆ ಯಾರ ಕಣ್ಣಿಗೂ ಬೀಳದಹಾಗೆ, ಶೀಘ್ರದಲ್ಲಿ ಮನೆಗೆ ಹೋಗಿ ಸೇರುವುದೇ ಮೇಲು! ಬಾ! ಹೋಗುವೆವು. (ಎಂದು ಹೋಗುವರು.)

ಇದು ವಿಷ್ಕಂಭವು.

ಆಸ್ಥಾನ—ಅಂಬರೀಷರಾಜನ ಸಭಾಮಂಟಪ.

(ಮಂತ್ರಿಸೇನಾಧಿಪತಿಗಳೂ, ವಸಿಷ್ಠಾದಿಮಹರ್ಷಿಗಳೂ ನೆರೆದಿರುವರು.)

ತೆರೆಯಲ್ಲಿ—ರಾಜಾಧಿರಾಜ ಅಂಬರೀಷಮಹಾರಾಜ ಪರಾಕ್ ಎಚ್ಚರಿಕೆ. (ದಂಡಧಾರಿಯಾದ ಕಂಚುಕಿಯು ದಾರಿಯನ್ನು ತೋರಿಸುತ್ತ ಬರುವನು.) ಛತ್ರಚಾಮರಾದಿಬಿರುದುಗಳೊಡನೆ ರಾಜನು ಸಭಾಸ್ಥಾನವನ್ನು ಪ್ರವೇಶಿಸುವನು. ಸಭೆಯಲ್ಲಿದ್ದವರೆಲ್ಲರೂ ಎದ್ದು ನಿಲ್ಲುವರು. ರಾಜನು ಎಲ್ಲರಿಗೂ ಅಭಿವಂದಿಸಿ, ಸಿಂಹಾಸನದ ಬಳಿಯಲ್ಲಿ ನಿಲ್ಲುವನು.)

ರಾಜಂ—ಪೂಜ್ಯರೆ! ಕುಲಕ್ರಮಾಗತವಾದ ಈ ಧರ್ಮಾಸನವನ್ನೇರಿ ರಾಜಕಾರ್ಯವನ್ನಾರಂಭಿಸುವುದಕ್ಕೆ ಮೊದಲು, ದೇವದೇವನಾದ ಶ್ರೀಹರಿಯನ್ನು ಧ್ಯಾನಿಸುವೆವು.

ವಸಿಷ್ಠರು-ಆಹಾ! ಅದಕ್ಕೆ ತಡೆಯೇನು? ಯಾವಕಾರ್ಯಗಳಲ್ಲಿಯೂ ಮೊದಲು ನಡೆಸಬೇಕಾದ ಪೂರ್ವರಂಗವೇ ಇದು!

(ಎಲ್ಲರೂ ಕೈಮುಗಿದು ಪ್ರಾರ್ಥಿಸುವರು.)

ರಾಗ. ತಾಳ.

**ದೇವದೇವ ಮುರಾರೀ | ಜಯ | ಪಾವನಾತ್ಮಕ ಶೌರೀ |**
**ಶ್ರೀವನಿತಾವರ | ಸಕಲಾಧಾರ || ದೇವ ||**

ಕರುಣಾ। ಭರಣಾ । ಸುರಗಣಶರಣಾ।
ವರಮುನಿಸನ್ನುತ । ದಿವ್ಯಚರಣಾ ॥ ದೇವ॥ ॥ ೧ ॥

ನವನೀ।ರದನೀ । ಲಶುಭಾವಯವಾ ।
ಭವ ಭಯ ಹರ ಪರ । ವಾಸುದೇವಾ॥ದೇವ॥ ॥ ೨ ॥

(ರಾಜನು ಆಸನದಲ್ಲಿ ಕುಳಿತಮೇಲೆ ಎಲ್ಲರೂ ಕುಳ್ಳಿರುವರು.)

**ರಾಜಂ**—ಎಲೈ ಮಂತ್ರಿಶ್ರೇಷ್ಠರೆ! ಕ್ಷಾಮಡಾಮರಾದಿಬಾಧೆಗಳಿಲ್ಲದೆ ನಮ್ಮ ದೇಶವೆಲ್ಲವೂ ಸುಭಿಕ್ಷವಾಗಿರುವುದಷ್ಟೆ? ನಮ್ಮ ಪ್ರಜೆಗಳೆಲ್ಲರೂ ಕ್ಷೇಮದಿಂದಿರುವರಷ್ಟೆ?

**ಮಂತ್ರಿ**—ರಾಜೇಂದ್ರಾ! ಧರ್ಮಮೂರ್ತಿಯಾದ ನೀನು ರಕ್ಷಕನಾಗಿರುವಾಗ, ದೇಶಕ್ಷೇಮಕ್ಕೆ ಯಾವವಿಧದಲ್ಲಿ ಕೊರತೆಯುಂಟು?

ರಾಜಂ—ಓ ಸೇನಾಪತೀ! ನಮ್ಮಸೇನಾಪರಿಕರಗಳೆಲ್ಲವೂ, ದೇಶದಲ್ಲಿ ಶತ್ರುಚೋರಾದಿಬಾಧೆಗಳಿಗೆ ಅವಕಾಶಕೊಡದಂತೆ ಪ್ರಜೆಗಳ ಕ್ಷೇಮಚಿಂತೆಯಲ್ಲಿ ಎಚ್ಚರದಿಂದಿರುವುವಷ್ಟೆ?

**ಸೇನಾಪತಿ**—ರಾಜೇಂದ್ರಾ! ಅದಕ್ಕೆ ತಡೆಯೇನು? ನಿನ್ನ ಉದ್ದೇಶದಂತೆ ನಮ್ಮ ಸೇನೆಗಳೆಲ್ಲವೂ ಪ್ರಜಾಕ್ಷೇಮದಲ್ಲಿಯೇ ನಿರತವಾಗಿರುವುವು. ಅಥವಾ ಮಹಾತ್ಮನಾದ ನೀನು ರಕ್ಷಕನಾಗಿರುವಾಗ ಈ ಸೈನ್ಯಗಳಿಂದೇನು?

ಕಂ॥ ನಿನ್ನಯ ತೇಜೋಬಲಮೇ ।
ತಾನ್ನೀಗಿಪುದಿಳೆಗನಿಷ್ಟದೋಷಮನೆಲ್ಲಂ ।
ನಿನ್ನ ಮನಸ್ಸಂಕಲ್ಪಮೆ।
ಮುನ್ನೆರವುಗುಮಖಿಲಜನದಭೀಷ್ಟಾರ್ಥಗಳಂ ॥

ಆದುದರಿಂದ ನಮ್ಮಲ್ಲಿರುವ ಸೈನ್ಯದುರ್ಗಾದಿಗಳೆಲ್ಲವೂ, ನಿನಗೆ ನೆಪಮಾತ್ರದ 'ರಾಜಚಿಹ್ನಗಳಾಗಿರುವುವೇಹೊರತು, ಅವುಗಳಿಂದ ಸಾಧಿಸಬೇಕಾದ ಕಾರ್ಯಗಳೇನೂ ಇಲ್ಲ!

ರಾಜಂ— ಎಲೈ ಮಂತ್ರಿಸೇನಾಪತಿಗಳಿರಾ! ಪ್ರಜಾಕ್ಷೇಮಚಿಂತೆಯಲ್ಲಿ ನೀವೆಲ್ಲರೂ ನನಗೆ ಸಹಾಯಕರಾಗಿರುವಾಗ, ಯಾವವಿಧದಲ್ಲಿ

ಕೊಂತೆಯುಂಟು! ನಾನು ನಿಮಗೆ ಹೊಸದಾಗಿ ಹೇಳಿ ತಿಳಿಸಬೇಕಾದುದೇನೂ ಇಲ್ಲ! ಆದರೂ ಈಗ ನಾನು, ಈ ಸ್ಥಾನ ಗೌರವಕ್ಕಾಗಿ, ನಿಮಗೆ ಒಂದೆರಡು ಮಾತುಗಳನ್ನು ಹೇಳಬೇಕಾಗುವುದು. ಮುಖ್ಯವಾಗಿ ನೀವೆಲ್ಲರೂ ಗಮನಿಸಬೇಕಾದ ವಿಷಯವೇನೆಂದರೆ;- ಪ್ರಜೆಗಳಿಂದ ನನಗೆ ಸಲ್ಲತಕ್ಕ ರಾಜಾದಾಯಗಳೆಲ್ಲವೂ, ಆ ಪ್ರಜೆಗಳ ಕ್ಷೇಮಕ್ಕಾಗಿಯೇ ವಿನಿಯೋಗಿಸಲ್ಪಡಬೇಕೇಹೊರತು, ನಮ್ಮ ಭೋಗಾರ್ಥವಲ್ಲ! ನಮ್ಮ ಸೇನಾಪರಿಕರಗಳೆಲ್ಲವೂ ಶತ್ರುಚೋರಾದಿಬಾಧೆಗಳಿಲ್ಲದಹಾಗೆ ಪ್ರಜೆಗಳನ್ನು ಕ್ಷೇಮದಿಂದಿರಿಸುವುದಕ್ಕಾಗಿಯೇಹೊರತು, ಲೋಭಬುದ್ಧಿಯಿಂದ ರಾಜ್ಯವನ್ನು ಹೆಚ್ಚಿಸುವುದಕ್ಕಲ್ಲ! ಈ ವಿಚಾರವನ್ನು ನೀವು ನೆನಪಿನಲ್ಲಿಟ್ಟು, ನಿಮ್ಮ ನಿಮ್ಮ ಅಧಿಕಾರಗಳನ್ನು ನಡೆಸುತ್ತ ಬರಬೇಕು. ಮುಖ್ಯವಾಗಿ ನಮ್ಮ ಪ್ರಜೆಗಳಿಗೆ ಯಾವವಿಧದ ಹಾನಿಯೂ ಇಲ್ಲದಂತೆ, ಅವರನ್ನು ಕ್ಷೇಮದಿಂದ ನಡೆಸುತ್ತಬರುವುದೇ ನಮ್ಮ ಅವಶ್ಯಕಾರ್ಯವು.

ವಸಿಷ್ಠಂ—ರಾಜೇಂದ್ರಾ! ಸಾಕ್ಷಾನ್ನಾರಾಯಣನಿಗ ಅಸಾಧಾರಣಚಿಹ್ನವಾದ ಸುದರ್ಶನಚಕ್ರವೇ ನಿನಗೆ ಬೆಂಬಲವಾಗಿರುವಾಗ, ನಿನ ದೇಶಕ್ಕಾಗಲಿ, ನಿನ್ನ ಪ್ರಜೆಗಳಿಗಾಗಲಿ, ಹಾನಿಯೆಂದರೇನು? ಲೋಕದಲ್ಲಿ ನಿನಗಿಂತಲೂ ಪರಮಧನ್ಯರಾರುಂಟು!

ರಾಜಂ—ಪೂಜ್ಯರೆ! ನಿಮ್ಮ ಪ್ರೀತಿವಚನಗಳಿಗಾಗಿ ನಾನು ಕೃತಜ್ಞನಾಗಿರುವೆನು. ಆದರೇನು? ನನಗೆ ಸರ್ವವಿಧದಲ್ಲಿಯೂ ನೀವೇ ಮಾರ್ಗದರ್ಶಿಗಳಾಗಿರುವುದರಿಂದ, ನನಗೆ ಯಾವ ಅಭ್ಯುದಯವುಂಟಾಗಿದ್ದರೂ, ಅದೆಲ್ಲವೂ ನಿಮ್ಮ ಅನುಗ್ರಹದಿಂದಲ್ಲದೆ ಬೇರೆಯಲ್ಲ! ಅಸಾಧಾರಣವಾದ ಭಗವದನುಗ್ರಹಕ್ಕೆ ನಾನು ಪಾತ್ರನೆಂಬುದರಲ್ಲಿ ಸಂದೇಹವೇನು? ಏಕೆಂದರೆ:—

ಕಂ॥ ಘನಮುನಿಗಳ್ಗಂ ನಿಜದ ।
ರ್ಶನಮಾತ್ರಮನೀಯದಖಿಲಲೋಕೇಶಂ ಮ ।

ತ್ತ್ರನೆಗಿತ್ತ್ರಂ ತನ್ನ ಸುದ ।
ರ್ಶನಮನೆ! ತನ್ನಂತೆ ಧನ್ಯರಾರಿನ್ನಿಳೆಯೊಳ್?॥

ಅದುದರಿಂದ:—

ರಾಗ. ತಾಳ.

ಅಹಹ ನಾನೇ । ಧನ್ಯನಖಿಲ । ಲೋಕಮಾನ್ಯನು ।
ಮಹಿಯೊಳೆನ್ನ । ಭಾಗ್ಯಕಾವುದೆಣೆಯೊ । ಕಾಣೆನು॥ಅ॥
ಎನ್ನ ಜನ್ಮ । ವೆನ್ನ ಜೀವನ । ವೆನ್ನ ಭಾಗ್ಯವು।
ಸನ್ನುತಾಂಗನ । ಸೇವೆಯಿಂದ । ಸಫಲವಾದುದು ॥ ॥ ೧ ॥
ಸರಸಿಜಾಕ್ಷನ । ಸುಗುಣಕೀರ್ತನ । ಸುಧೆಯ ಸವಿಯುವ ।
ಪರಮಭಾಗ್ಯವೆ । ಭಾಗ್ಯವೆಣಿಸಲಖಿಲಲೋಕಕೆ ॥ ॥ ೩ ॥
ಶರಣಜನಕೆ । ತನ್ನನೆ ತಾ । ನೆರೆದು ಪೋಷಿಪ ।
ಹರಿಯ ಕರುಣ । ದಳತೆಗೆ ನೆರೆ । ಪಾರಮಾವುದೋ ॥ ॥ ೪ ॥

ಆದರೇನು ? ಎಲೈ ಅಮಾತ್ಯರೆ ! ಕೇವಲಸ್ವಾರ್ಥಪರರಂತೆ ಈ ನನ್ನ ಭಾಗ್ಯಕ್ಕಾಗಿ ನಾನೇ ಸಂತೋಷಪಡುತ್ತಿರುವುದರಲ್ಲಿ ನನಗೆ ಅಷ್ಟಾಗಿ ಮನಸ್ತೃಪ್ತಿಯಿಲ್ಲ! ನನ್ನಂತೆಯೇ ನನ್ನ ಸಮಸ್ತಪ್ರಜೆಗಳೂ, ಆಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರರಾಗಿ, ಸುಖಿಸುತ್ತಿರಬೇಕೆಂಬುದೇ ನನ್ನ ಕೋರಿಕೆ ! ಆದುದರಿಂದ ಎಲೈ ಮಂತ್ರಿವರ್ಯರೆ ! ನಮ್ಮದೇಶದ ಗ್ರಾಮಗ್ರಾಮಗಳಲ್ಲಿಯೂ, ಪ್ರಜೆಗಳೆಲ್ಲರೂ ಸದಾಹರಿಕೀರ್ತನಪರರಾಗಿದ್ದು, ನಿಷ್ಕಲ್ಮಷವಾದ ಭಕ್ತಿಯಿಂದ ಆ ಭಗವದನುಗ್ರಹಕ್ಕೆ ಪಾತ್ರರಾಗುವಂತೆ ಮಾಡಬೇಕಾದುದು ನಮ್ಮ ಪ್ರಧಾನಕಾರ್ಯವು. ಆ ಶ್ರೀಹರಿಯನ್ನೊಲಿಸುವುದಕ್ಕೆ ಭಕ್ತಿಯೋಗಕ್ಕಿಂತಲೂ ಮೇಲಾದ ಉಪಾಯವಿಲ್ಲ. ಯಜ್ಞ, ಯಾಗ, ಜಪ, ತಪಸ್ಸುಗಳೆಲ್ಲವೂ ಆ ಹರಿಕೀರ್ತನೆಯೊಂದರಲ್ಲಿಯೇ ಅಡಗಿರುವುವು. ಆದುದರಿಂದ,

ಕಂ॥ ಹರಿಚರಣಸ್ಮೃತಿಯೆ ತಪಂ ।
ಹರಿಗುಣಕೀರ್ತನಮೆ ಸಕಲಮಂತ್ರಜಪಂ ಶ್ರೀ ।

ಹರಿಪೂಜೆಯೇ ವ್ರತಾವಳಿ ।
ಹರಿಸೇವೆಯೆ ಯಜ್ಞವೆಂದು ಭಾವಿಪ್ರುದನಿಬರ್ ॥

ಆದರೆ ಯಜ್ಞಯಾಗಾದಿಕರ್ಮಗಳಿಗಿಂತಲೂ ಈ ಭಕ್ತಿಯೋಗ ವನ್ನು ಸುಲಭವಾಗಿ ಸಾಧಿಸಬಹುದಾದರೂ, ದೃಢಮನಸ್ಸಿಲ್ಲದ ವರಿಗೆ ಇದು ಸಿದ್ಧಿಸಲಾರದು.

ರಾಗ - ಆರಬಿ - ಆದಿತಾಳ.

"ಸಾಮಾನ್ಯವಲ್ಲ ಶ್ರೀ । ಹರಿಸೇವೆ । ಪಾಮರಮನುಜಗೆ । ಸಾ ॥ ಪ ॥
ನೇಮನಿಷ್ಠೆ ಬಿಡ। ದಂದಲನುದಿನ । ಸಾಮಜವರದನ । ಪ್ರೇಮದಿ ಭಜಿಪುದು॥ಅ॥
ಅಂತರಂಗಮಲವೆಲ್ಲವನಳಿದು । ಸಂತತಮನದಲಿ ಶ್ರೀ ।
ಕಾಂತನ ಚರಿತೆಯ । ಕೇಳುತ ನಲಿದು । ಸಂತಸವನು ತಳೆದು ।
ಸಂತರ ಸಂಗದಿ। ಸಂತತವಿದ್ದು ನಿ । ರಂತರ ಹರಿಯನು। ಚಿಂತಿಸಬೇಕು॥ಸಾ॥
ಜ್ಞಾನಕರ್ಮದಿಂ । ಧ್ರಿಯಗಳ ನಿಗ್ರಹಿಸಿ। ಜ್ಞಾನವ ಸಂಗ್ರಹಿಸಿ।
ಹಾನಿವೃದ್ಧಿಗಳಿ । ವೆರಡನು ತಾ ಸಹಿಸಿ । ದೀನತ್ವವ ವಹಿಸಿ ।
ಮಾನಾವಮಾನ ಸ।ಮಾನಗಳೆಂದುನಿ।ದಾನದಿ ಹರಿಗುಣ।ಧ್ಯಾನವಮಾಳ್ಪುದು॥"

ಈ ವಿಧಾನದಿಂದ ಹರಿಧ್ಯಾನಪರರಾಗಿದ್ದರೆಮಾತ್ರವೇ ಭಕ್ತಿಯು ಪರಿಪಕ್ವವಾಗುವುದು. ಮೊದಲು ಇವೆಲ್ಲಕ್ಕೂ ಸತ್ಸಹವಾಸವೇ ಮೂಲವು. ಅತಿಥಿಗಳಾಗಿ ಬಂದ ಹರಿಭಕ್ತೋತ್ತಮರನ್ನು ಯಥೋಚಿತವಾಗಿ ಸತ್ಕರಿಸಿ, ಆವರ ಅನುಗ್ರಹಕ್ಕೆ ಪಾತ್ರರಾಗಬೇಕು. ದೇವರ್ಷಿಯಾದ ನಾರದನೂಕೂಡ, ವಿಷ್ಣುಭಕ್ತರ ಸಹವಾಸಬಲದಿಂದಲ್ಲವೇ ವೈಷ್ಣವಾಗ್ರಣಿಯೆನಿಸಿಕೊಂಡು ಲೋಕಪೂಜ್ಯನಾದನು!

(ತೆರೆಯಲ್ಲಿ ಗಾನಧ್ವನಿ.)

(ನಾರದಪರ್ವತರಿಬ್ಬರೂ ಹರಿಕೀರ್ತನೆಯೊಡನೆ ನರ್ತಿಸುತ್ತ ಬರುವರು.)

ರಾಗ - ತಾಳ.

ನಾರಾಯಣಾ! ಭಕ್ತ । ಪರಾಯಣಾ । ಭಯನಿವಾರಣಾ । ಲೋಕಕಾರಣಾ ॥
ಸುರವರೇಣ್ಯ । ನತಶರಣ್ಯ । ಭುವನಮಾನ್ಯ । ಭವಭಯತಾರಣಾ ॥ ೧ ॥

ಸರೋಜಸಂಭವ । ಪುರಾರಿಮುಖಸುರ । ವರಾರ್ಚಿತಾಂಘ್ರಿಸ। ರೋರುಹಾ।
ಖಲವಿದಾರ । ನಿಗಮೋದ್ಧಾರ । ಭಕ್ತಮಂದಾರ । ವರಕರುಣಾಕರಾ ॥೨॥
ವಿನಾಶಿತಾಖಿಲ । ಘನಾಘಸಂಕುಲ । ಕೃಪಾಲವಾಲ ಸು । ನಿರ್ಮಲಾ॥
ಭವವಿನಾಶ । ಶುಭವಿಲಾಸ । ಜಯ ಪರೇಶ । ಪಂಕಜಲೋಚನಾ ॥ ೩ ॥

(ಸಭಾಸದರೆಲ್ಲರೂ ಇದಿರೆದ್ದು ನಿಲ್ಲುವರು.! ರಾಜನು ಆಸನದಿಂದ ಕೆಳಗಿಳಿದು ಬಂದು.)

ರಾಜಂ—ಪೂಜ್ಯರಾದ ದೇವಮುನಿಗಳಿಗೆ ವಂದಿಸುವೆನು.

ನಾರದಂ—ವಿಜಯೀಭವ !

ಪರ್ವತಂ—ಕಲ್ಯಾಣಮಸ್ತು !

ರಾಜಂ—(ಪೀಠವನ್ನು ತೋರಿಸಿ) ಪೂಜ್ಯರೆ! ಈ ಪೀಠಗಳನ್ನಲಂಕರಿಸಬೇಕು.

(ಎಲ್ಲರೂ ಕುಳ್ಳಿರುವರು)

ರಾಜಂ—ಮುನಿವರ್ಯರೆ ! ಮಹಾತ್ಮರಾದ ನಿಮ್ಮ ಪಾದಸ್ಪರ್ಶದಿಂದ ಈಗ ನನ್ನಗೃಹವು ಪಾವನವಾಯಿತು. ನಿಮ್ಮ ದರ್ಶನದಿಂದ ನಾನು ಕೃತಾರ್ಥನಾದೆನು. ಆದರೆ ಆಕಸ್ಮಿಕವಾದ ತಮ್ಮ ಆಗಮನಕ್ಕೆ ಕಾರಣವೇನೆಂದು ತಿಳಿಯಲು ನನ್ನಮನಸ್ಸು ಕುತೂಹಲಪಡುತ್ತಿರುವುದು ! ಮಹರ್ಷಿಗಳ ತಪಸ್ಸಿಗಾಗಲಿ, ಗೋಬ್ರಾಹ್ಮಣರಿಗಾಗಲಿ, ಅವರವರ ವರ್ಣಾಶ್ರಮಧರ್ಮಗಳಿಗಾಗಲಿ ವಿಘಾತವೇನೂ ಇಲ್ಲವಷ್ಟೆ ?

ಪರ್ವತಂ—ಕಂ॥ "ನೃಪ ನೀಂ ಪಾಲಕನಾಗಿರೆ ।
ತಪಸ್ವಿಗಳ ತಪಕೆ ವಿಘ್ನಮೆತ್ತಣಿನಕ್ಕುಂ ।
ತಪನಂ ಪ್ರಜ್ವಲಿಸುತ್ತಿರೆ
ವಿಪುಲಾಮಂಡಲದೆ ತಿಮಿರಮೆಂತುದ್ಭವಿಕುಂ ?॥"

ನಾರದ—ರಾಜೇಂದ್ರಾ ! ನಿನ್ನ ತೇಜಃಪ್ರಭಾವದಿಂದಲೇ ತಪೋವಿಘ್ನಗಳೆಲ್ಲವೂ ನಾಶವಾಗುವುವು. ಭಗವಂತನ ಸುದರ್ಶನಚಕ್ರವು ನಿನ್ನ ಹಸ್ತಗತವಾಗಿರುವುದರಿಂದ, ಚಕ್ರಪಾಣಿಯಾದ ಆ ಶ್ರೀಮನ್ನಾರಾಯಣನ ಸಾಕ್ಷಾದ್ದರ್ಶನದಂತೆ ನಿನ್ನ ದರ್ಶನವೇ ನಮ್ಮ ತಪಸ್ಸಿಗೆ ಫಲರೂಪವಾಗಿರುವುದು.

ಪರ್ವತ—ಈ ನಿನ್ನ ಅದ್ಭುತಕೀರ್ತಿಯನ್ನು ಕೇಳಿಯೇ ನಾವೂ ನಿನ್ನ ದರ್ಶನದಿಂದ ಧನ್ಯರಾಗಬೇಕೆಂದು ಇಲ್ಲಿಗೆ ಬಂದವರೇಹೊರತು, ಬೇರೆ ಯಾವ ಕಾರ್ಯೋದ್ದೇಶದಿಂದಲೂ ಬಂದವರಲ್ಲ. ರಾಜೇಂದ್ರಾ! ನಿನಗೂ, ನಿನ್ನ ರಾಜ್ಯಾಂಗಗಳಿಗೂ, ನಿನ್ನ ಪ್ರಜೆಗಳಿಗೂ ಕುಶಲವಷ್ಟೆ?

ರಾಜಂ—ಪೂಜ್ಯರೆ! ನಿಮ್ಮಂತಹ ಮಹಾತ್ಮರ ಪೂರ್ಣಾನುಗ್ರಹಕ್ಕೆ ಪಾತ್ರನಾಗಿರುವಾಗ, ನನ್ನ ಕ್ಷೇಮಕ್ಕೆ ಯಾವಭಾಗದಲ್ಲಿ ಕೊರತೆಯುಂಟಾಗಿದ್ದರೂ, ಭಗವನ್ಮಾಯೆಯ ಪ್ರಭಾವವನ್ನೂ, ಪ್ರಕೃತಿಬದ್ಧವಾದ ಈ ಪ್ರಪಂಚದ ಸ್ಥಿತಿಗತಿಗಳನ್ನೂ ಕರತಲಾಮಲಕದಂತೆ ಸಾಕ್ಷಾತ್ಕರಿಸಬಲ್ಲ ನಿಮಗೆ, ಈಗ ನಾನು ಹೊಸದಾಗಿ ತಿಳಿಸಬೇಕಾದುದೇನು? ಲೋಕದಲ್ಲಿ ಸಂಸಾರಿಯಾದ ಮನುಷ್ಯನು, ಎಷ್ಟೇಭಾಗ್ಯಶಾಲಿಯಾಗಿರಲಿ! ಎಷ್ಟೇ ಬಲಪರಾಕ್ರಮವುಳ್ಳವನಾಗಿರಲಿ! ಪುತ್ರಕಳತ್ರಾದಿಮೋಹಪಾಶದಲ್ಲಿ ಸಿಕ್ಕಿರುವವರೆಗೆ, ಅವನಿಗೆ ಕ್ಷೇಮವೆಂಬ ಮಾತೇ ಸುಳ್ಳು! ಅವನ ಮನಸ್ಸು ಅನವರತವೂ ಯಾವುದಾದರೂ ಒಂದು ಚಿಂತೆಯಿಂದ ಕುದಿಯುತ್ತಲೇ ಇರುವುದು.

ನಾರದಂ—ಆಹಾ! ಏನಿದು! ಭಗವದ್ಧ್ಯಾನಾಮೃತಪಾನದಿಂದ ನಿತ್ಯಸಂತೋಷಿಯಾದ ನಿನಗೂ ಕುಟುಂಬಚಿಂತೆಯೆ? ನಿನ್ನ ಚಿಂತೆಗೆ ಕಾರಣವೇನು?

ರಾಜಂ—ಪೂಜ್ಯರೆ!

ಕಂ ॥ ಕ್ಷಿತಿಯೊಳಗೆಣಿಸಲ್ "ಕನ್ಯಾ ।
ಪಿತೃತ್ವಮೇ ದುಃಖಹೇತು" ವೆಂಬೀನುಡಿ ನಿ।
ಶ್ಚಿತಮೆಂಬುದಕ್ಕೆ ನನ್ನೀ ।
ಸ್ಥಿತಿಯೆ ನಿದರ್ಶನಮೆನಿಪ್ಪುದೀಗಳ್ ನಿಜದಿಂ ॥

ಪೂಜ್ಯರೆ! ನನಗೆ ಶ್ರೀಮತಿಯೆಂಬ ಕನ್ಯೆಯೊಬ್ಬಳಿರುವಳು. ನನ್ನ ಪುಣ್ಯಫಲವೇ ಮೂರ್ತೀಭವಿಸಿದಂತೆ, ಸಕಲಗುಣಸಂಪನ್ನೆಯಾದ

ಆ ಕನ್ಯಾಮಣಿಗೆ ವಿವಾಹಕಾಲವು ಅತಿಕ್ರಮಿಸುತ್ತ ಬಂದಿರುವುದು. ದೇಶದೇಶಗಳನ್ನು ಹುಡುಕಿದರೂ ಅವಳ ರೂಪಗುಣಾದಿಗಳಿಗೆ ಅನುರೂಪನಾದ ವರನೊಬ್ಬನೂ ನಮ್ಮ ಕ್ಷತ್ರಿಯಕುಲದಲ್ಲಿ ಇದುವರೆಗೂ ಲಭಿಸಲಿಲ್ಲ! ಆಕೆಯ ವಿವಾಹವಿಷಯವಾದ ಚಿಂತೆಯು ನನ್ನನ್ನು ಬಹಳವಾಗಿ ಬಾಧಿಸುತ್ತಿರುವುದು. ಪ್ರತಿದಿನವೂ ದೇಶದೇಶಗಳಿಂದ ಅನೇಕರಾಜಕುಮಾರರ ಭಾವಚಿತ್ರಗಳನ್ನು ತರಿಸಿ ನೋಡುತ್ತಿರುವೆನು. ಇದುವರೆಗೆ ಯಾವುದೂ ನನ್ನ ಮನಸ್ಸಿಗೆ ಸಮರ್ಪಕವಾಗಲಿಲ್ಲ.

(ಸುಂದರಕನೆಂಬ ರಾಯಭಾರಿಯು ಚಿತ್ರಪಟಗಳೊಡನೆ ಪ್ರವೇಶಿಸುವನು.)

**ಸುಂದರಕ**—ಮಹಾರಾಜನಿಗೆ ವಿಜಯವಾಗಲಿ! ರಾಜೇಂದ್ರಾ! ನಾನು ಸುತ್ತಿನ ದೇಶಗಳಲ್ಲಿ, ನನಗೆ ಉತ್ತಮವೆಂದು ತೋರಿದ ಈ ಭಾವಚಿತ್ರಗಳನ್ನು ತಂದಿರುವೆನು. ಇವುಗಳನ್ನು ಪರಾಮರ್ಶಿಸಬೇಕು.

ರಾಗ ತಾಳ.

ಲಾಲಿಸೈ । ರಾಜವಂಶ । ಮೌಳಿ ಲೋಕಮಾನಿತ ನೀ॥ಪ॥
ತೊಳಲಿ ದೇಶಂಗಳ । ತಂದೆನೀ ಚಿತ್ರಗಳ॥ ಅ ॥
ಮಗಧಭೂಮಿ । ಪಾಲನಿವ । ನಗಣಿತಸೌ । ಭಾಗ್ಯದಿಂದ ।
ಜಗದಲ್ಲಿ ಸುವಿಖ್ಯಾತ । ಕೀರ್ತಿ ಸುಂದರಮೂರ್ತಿ ॥ ೧ ॥
ಇವನೆ ಕಾಂಭೋಜನು । ರವಿಸಮಾನತೇಜನು
ಭುವನವಿದಿತಪರಮವೈ । ಭವದಿ ರಾಜಿಸುವನು ॥ ೨ ॥
ಅಂಗಜಾ । ಕಾರನಿವ । ನಂಗಭೂಮಿಪತಿ ತನ್ನ ।
ತುಂಗವೀರ್ಯದಿಂದ ವೈರಿ । ಭಂಗವನ್ನೆ ಗೈದವನು ॥ ೩ ॥

ರಾಜಂ—(ಭಾವಚಿತ್ರಗಳನ್ನು ನೋಡಿ ಬೇಸರದಿಂದ) ಸುಂದರಕಾ! ನಿನ್ನ ಶ್ರಮವೂ ಸಫಲವಾಗುವಂತೆ ತೋರಲಿಲ್ಲ! ನೀನು ಹೇಳಿದಂತೆ ಈ ರಾಜಕುಮಾರರು ಅನೇಕವಿಷಯಗಳಲ್ಲಿ ಅನುರೂಪರಾಗಿದ್ದರೂ ಇವರ ಮುಖಲಕ್ಷಣಗಳಲ್ಲಿ ಲೋಪವು ಕಂಡು ಬರುವುದು. ಇನ್ನು

ನಮ್ಮ ವರಾನ್ವೇಷಣಪ್ರಯತ್ನವು ಸಾಕು ! ದೈವೇಚ್ಛೆಯಿದ್ದಂತಾಗಲಿ !

ನಾರದಂ—ರಾಜೇಂದ್ರಾ ! ಈ ಸ್ವಲ್ಪವಿಚಾರಕ್ಕಾಗಿ ಸರ್ವಜ್ಞನಾದ ನೀನೂ ಚಿಂತಿಸಬಹುದೆ ? ಸೃಷ್ಟಿಕರ್ತನಾದ ಭಗವಂತನು ಮೊದಲು ವರನನ್ನು ಸೃಷ್ಟಿಸಿದಮೇಲಲ್ಲವೇ ಕನ್ಯೆಯನ್ನು ಸೃಷ್ಟಿಸಿರಬೇಕು! ನಿನ್ನ ಮಗಳು ಹುಟ್ಟುವುದಕ್ಕೆಮೊದಲೇ ಅವಳಿಗೆ ತಕ್ಕ ವರನು ಎಲ್ಲಿಯೋ ಹುಟ್ಟಿರಬೇಕು. ಈ ಸೂಕ್ಷ್ಮಾಂಶವನ್ನು ನೀನು ಯೋಚಿಸಬೇಡವೆ? ಭಗವಂತನು ನಿನ್ನ ಮಗಳಿಗಾಗಿ ಸಂಕಲ್ಪಿಸಿರುವ ವರನಾವನೆಂಬುದನ್ನು ತಿಳಿಯಲಾರದುದಕ್ಕಾಗಿ, ಒಂದುವೇಳೆ ನೀನು ಚಿಂತಿಸಬಹುದೇಹೊರತು, ಈ ಪ್ರಪಂಚದೊಳಗಾಗಿ ನಿನ್ನ ಮಗಳಿಗೆ ತಕ್ಕ ವರನೇ ಇಲ್ಲವೆಂದು ಕೊರಗುವುದು ತಪ್ಪು ! ಅಘಟಿತಘಟನಾಸಮರ್ಥನಾದ ಆ ಭಗವಂತನ ಸಂಕಲ್ಪವನ್ನು ಹೀಗೆಂದು ತಿಳಿಯುವುದು ಯಾರಿಗೆ ತಾನೇ ಸಾಧ್ಯವು!

ವೃ. ಜನನಿಯ ಗರ್ಭಕೋಟರದೆ ಮೆಯ್ಯುಡುಗಿರ್ಪ್ಪ ಕಿಶೋರಕಕ್ಕೆ ಕಾ।
ನನದೊಳನಾಕುಲಂ ಕೆಡೆದು ಮೆಯ್ಮರೆದಿರ್ಪ್ಪ ಮಹಾಹಿಗಳ್ಗೆ ಜೀ।
ವನಮನೆ ಕಲ್ಪಿಸುತ್ತೆ ಸುಖದಿಂ ಪರಿಪೋಷಿಸುತಿರ್ಪನಾವನಾ।
ವನರುಹನಾಭನೇ ಘಟಿಯಿಸಲ್ಕೆರೆವಂ ನೆರೆ ದುರ್ಘಟಕಾರ್ಯವರ್ಗಮಂ॥

ಪರ್ವತಂ—ರಾಜಾ ! ಗುಣವತಿಯಾದ ನಿನ್ನ ಕನ್ಯೆಗೆ ಈ ಮನುಷ್ಯಲೋಕದಲ್ಲಿಯೇ ತಕ್ಕ ವರನು ಲಭಿಸಲಾರನೆಂದು ಭ್ರಮಿಸುವೆಯಲ್ಲವೆ ? ಅದು ನಿಜವಾಗಿದ್ದಪಕ್ಷದಲ್ಲಿ, ಆ ಶ್ರೀಹರಿಯೇ ತಾನಾಗಿ ವರರೂಪದಿಂದ ಬಂದು, ನಿನ್ನ ಮಗಳನ್ನು ವರಿಸಿದರೂ ವರಿಸಬಹುದು. ಆತನ ಸಂಕಲ್ಪವನ್ನಿದಿರುನೋಡುತ್ತಿರಬೇಕಾದುದೊಂದೇ ನಿನ್ನ ಕಾರ್ಯವು.

ರಾಜಂ— ಪೂಜ್ಯರೆ ! ನಿಮ್ಮ ಹಿತವಾದಗಳನ್ನು ಶಿರಸಾವಹಿಸಿದೆನು.

(ಕಂಚುಕಿಯು ಪ್ರವೇಶಿಸಿ)

ಕಂಚುಕಿ—ಮಹಾರಾಜನಿಗೆ ವಿಜಯವಾಗಲಿ! ಶ್ರೀಮತೀಕುಮಾರಿಯು, ಉತ್ತಮಪತಿಪ್ರಾಪ್ತಿಗಾಗಿ, ನಮ್ಮ ಗೃಹೋದ್ಯಾನದಲ್ಲಿ ವರಲಕ್ಷ್ಮೀಪೂಜೆಯನ್ನು ನಡೆಸುತ್ತಿರುವಳು. ಆ ವ್ರತಸಮಾಪ್ತಿಕಾಲಕ್ಕೆ ಬ್ರಾಹ್ಮಣೋತ್ತಮರೊಡನೆ ಮಹಾರಾಜನೂ ಅಲ್ಲಿಗೆ ಬರಬೇಕೆಂದು ದೇವಿಯರು ಅಪೇಕ್ಷಿಸುತ್ತಿರುವರು.

ರಾಜಂ—(ಸಂತೋಷದಿಂದ) ಹಾಗಿದ್ದರೆ ನಾವು ಅವಶ್ಯವಾಗಿ ಅಲ್ಲಿಗೆ ಬರುವೆವೆಂದು ತಿಳಿಸು ಹೋಗು! (ನಾರದಪರ್ವತರನ್ನು ನೋಡಿ) ಪೂಜ್ಯರೆ! ತಾವೂ ಆ ಉತ್ಸವಕಾಲಕ್ಕೆ ಅಲ್ಲಿಗೆ ಬಂದು, ನನ್ನ ಮಗಳನ್ನು ಆಶೀರ್ವದಿಸಿ ಹೋಗಬೇಕು.

ನಾರದಂ—ರಾಜೇಂದ್ರಾ! ನಿನ್ನ ಇಷ್ಟದಂತೆಯೇ ಆಗಲಿ!

ರಾಜಂ—(ಕಂಚುಕಿಯನ್ನು ಕುರಿತು) ಜಯಂಧರಾ! ಮಹಾತ್ಮರಾದ ನಾರದಪರ್ವತರು ಬಂದಿರುವರೆಂಬ ಸಂಗತಿಯನ್ನು ದೇವಿಗೆ ಮುಂದಾಗಿ ತಿಳಿಸಿಬಂದು, ಸಕಾಲಕ್ಕೆ ಇವರನ್ನೂ ಅಲ್ಲಿಗೆ ಕರೆದುಕೊಂಡು ಹೋಗು! ನಾನೂ ಶೀಘ್ರದಲ್ಲಿಯೇ ಬಂದು ಸೇರುವೆನು.

ಕಂಚುಕಿ—ಅಪ್ಪಣೆ (ಹೋಗುವನು.)

ತೆರೆಯು ಬಿಳುವುದು.

ಇದು ದ್ವಿತೀಯಾಂಕವು.

# ತೃತೀಯಾಂಕಂ

ಆಸ್ಥಾನ:—ಅರಮನೆಯ ಉದ್ಯಾನದ ಮುಂದಿನ ಬಯಲು.

(ಮನ್ಮಥನು ಕಬ್ಬಿನ ಬಿಲ್ಲನ್ನೂ, ಪುಷ್ಪಬಾಣಗಳನ್ನೂ ಹಿಡಿದು, ಆತುರದಿಂದ ಪ್ರವೇಶಿಸುವನು.)

ಮನ್ಮಥಂ—ಆಹಾ! ಆ ನಾರದನ ಮನಸ್ಸನ್ನು ಕದಲಿಸಬೇಕೆಂದು ಬಹಳ ಹೊತ್ತಿನಿಂದ ನಿರೀಕ್ಷಿಸುತ್ತಿದ್ದ ನನಗೆ, ಈಗ ತಕ್ಕ ಅವಕಾಶವು ಸಿಕ್ಕಿರುವುದು! ಈಗ ನಾರದನು ಈ ಉದ್ಯಾನವನವನ್ನು ಪ್ರವೇಶಿಸುವನು. ಸಹಜವಾಗಿಯೇ ಇಲ್ಲಿನ ಸನ್ನಿವೇಶಗಳು ಎಂತಹ ಜಿತೇಂದ್ರಿಯರಿಗಾದರೂ ಕಾಮೋದ್ದೀಪನವನ್ನುಂಟುಮಾಡುವಂತಿರುವುವು. ಇದರಮೇಲೆ ನಾನು, ನನ್ನ ಪ್ರಿಯಮಿತ್ರನಾದ ವಸಂತನನ್ನು ಮುಂದಾಗಿಯೇ ಅಲ್ಲಿಗೆ ಕಳುಹಿಸಿ, ನಾರದನು ಅಲ್ಲಿಗೆ ಬರುವಷ್ಟರಲ್ಲಿ, ಪುಷ್ಪಪಲ್ಲವಾದಿಸಮೃದ್ಧಿಗಳಿಂದ ಅದಕ್ಕೆ ಮತ್ತಷ್ಟು ಕಳೆಯೇರಿಸುವಂತೆ ಮಾಡುವೆನು. ಆ ಸನ್ನಿವೇಶವನ್ನು ಕಣ್ಣಿಂದ ನೋಡುವಾಗಲೇ, ನಾರದನಿಗೆ ಸರ್ವೇಂದ್ರಿಯಗಳೂ ಕದಲುವುವು. ಆದೇಸಮಯದಲ್ಲಿ ನಾನೂ ಕಣ್ಮರೆಯಾಗಿದ್ದು, ಈ ನನ್ನ ಪುಷ್ಪಬಾಣಗಳನ್ನು ಪ್ರಯೋಗಿಸುವೆನು. ಅವನ ಮನಸ್ಸು ಹೇಗೆ ಮೋಹಾಕುಲವಾಗದಿರುವುದೋ ನೋಡುವೆನು!

ವೃ॥ ಲಲಿತೋದ್ಯಾನದ ಲಕ್ಷ್ಮಿಯಿಂ ಶುಕಪಿಕಪ್ರಧ್ವಾನದಿಂ ಶೀತಲಾ
ನಿಲಸುಸ್ಪರ್ಶನದಿಂ ಪ್ರಕೃಷ್ಟಸುಮನಸ್ಸೌಗಂಧ್ಯದಿಂ ಸತ್ಫಲಾ ।
ವಳಿಯಿಂದಾಮುನಿಯಂ ಮರುಳ್ಗೊಳಿಸುತಂ ಪಂಚೇಂದ್ರಿಯಕ್ಷೋಭದಿಂ ।
ಸಲೆ ವೈರಾಗ್ಯದ ಬೀಡೆನಿಪ್ಪ ಮನದೊಳ್ ಸ್ತ್ರೀಮೋಹಮಂ ಬಿತ್ತುವೆಂ ॥

ಆಹಾ ! ದೇವೇಂದ್ರನು ನನಗೆ ಮಾಡಿದ ಗೌರವವನ್ನು ಸಹಿಸಲಾರದೆ, ದೇವಸಭೆಯಲ್ಲಿ ನನ್ನನ್ನು ನಿಂದಿಸಿ ಅವಮಾನಪಡಿ

ಸಿದ ಆನಾರದನಿಗೆ ತಕ್ಕ ಪ್ರತಿಕ್ರಿಯೆಯನ್ನು ಮಾಡದೆ ತೀರದು! ಹರಿಹರಬ್ರಹ್ಮಾದಿಗಳನ್ನೂ ಮೋಹಪಾಶದಲ್ಲಿ ಬಂಧಿಸಿ, ತ್ರೈಲೋಕ್ಯವಿಜಯಿಯೆಂಬ ಖ್ಯಾತಿಯನ್ನು ಹೊಂದಿದ ನಾನು,ಆ ಬಡಯೋಗಿಯನ್ನು ನನ್ನ ಕಾಮಪಾಶದಲ್ಲಿ ಕಟ್ಟಲಾರದೆಹೋದರೆ, ಈ ಧನುರ್ಬಾಣಗಳನ್ನು ಹೊತ್ತು ಫಲವೇನು!? ಇರಲಿ ! ಆ ನಾರದನನ್ನು ಕ್ಷಣಮಾತ್ರವಾದರೂ ನನ್ನ ಕಾಮಪಾಶದಲ್ಲಿ ಬಂಧಿಸದೆ ಬಿಡುವವನಲ್ಲ! (ಸ್ವಲ್ಪಹೊತ್ತು ಚಿಂತಿಸಿ) ಆದರೆ ಈಗ ಪರ್ವತಮುನಿಯೂ ನಾರದನ ಜತೆಯಲ್ಲಿರುವನು ! ಅವನೂ ನನ್ನ ವಿರೋಧಿಕೋಟಿಯಲ್ಲಿಯೇ ಸೇರಿ, ನನ್ನನ್ನು ದ್ವೇಷಿಸುತ್ತಿರುವನು. ನಾನು ಪ್ರಯತ್ನಪೂರ್ವಕವಾಗಿ ಆ ನಾರದನ ಮನಸ್ಸನ್ನು ಕದಲಿಸುತ್ತ ಬಂದರೂ, ಪರ್ವತನು ಅವನ ಸಮೀಪದಲ್ಲಿಯೇ ಇರುವುದರಿಂದ, ಆಗಾಗ ಅವನಿಗೆ ಸಮಯೋಚಿತವಾದ ಬೋಧನೆಗಳಿಂದ ಅವನನ್ನೆಚ್ಚರಿಸಿ,ಅವನ ಬುದ್ಧಿಯು ಕದಲದಂತೆ ಮಾಡಬಹುದು. ಆಗ ನನ್ನ ಸಾಹಸವೆಲ್ಲವೂ ವಿಫಲವಾಗುವುದು. ಆದುದರಿಂದ ಆ ನಾರದಪರ್ವತರಿಬ್ಬರನ್ನೂ ಈ ನನ್ನ ಪುಷ್ಪಬಾಣದಿಂದ ಏಕಕಾಲದಲ್ಲಿಯೇ ಮೋಹಗೊಳಿಸಿ ಕಾಮಪಾಶದಲ್ಲಿ ಕಟ್ಟಿ, ಅವರವರಲ್ಲಿಯೇ ಪರಸ್ಪರಮಾತ್ಸರ್ಯವನ್ನು ಹುಟ್ಟಿಸುವೆನು. ಇನ್ನು ಕಾಲವಿಳಂಬವು ಸಾಕು ! ಹೊತ್ತು ಮೀರುವುದು! ಇದೋ ಹೊರಡುವೆನು.

ರಾಗ - ನೋಟು - ತಾಳ.

ಇದೊ!ಪೋಗುವೆ | ನಿದೊ! ಪೋಗುವೆ | ನಿದೊ ಪೋಗಿ|ಸೇರುವೆ | ನಾ ಬೇಗ|
ಸಾಗದ ಗರ್ವದೆ | ಬೀಗಿದ ನಾರದ | ಯೋಗಿಯ ಮದವುಡುಗಿಸಲೀಗ |
ಛಲವ ಮೀರಿ | ಬಲವ ತೋರಿ | ಮೆರೆವ ವೈರಿ|ವ್ರಜವ ಸಾರಿ|
ಭಂಗಿಪ ನನ್ನ ಶ|ರಾಳಿಯೆ! ಬಲುಮೆಗೆ | ನಿಲುವನೆ ಫಡಫಡ ಬಡಜೋಗಿ||
ಸುರಾಸುರರ | ನಿರಾಕರಿಸಿ | ಪರಾಭವಿಪ ಶರಾಸನದಿ || ೧ ||
ಆ ಬಡಮೌನಿಯ | ಭಕ್ತಿವಿರಕ್ತಿಗೆ | ಮುಕ್ತಿಯನೀಗಲೆ | ಸಲಿಸುವೆನು|| ೨ ||

ಎಂದು ಹೋಗುವನು.

ಆಸ್ಥಾನ:—ಅರಮನೆಯ ಗೃಹೋದ್ಯಾನ.

(ನಿಯಮನಿಷ್ಠಳಾದ ಶ್ರೀಮತಿಯು, ಮಂತ್ರಕಲಶದ ಮುಂದೆ, ಧೂಪದೀಪಾದಿಪೂಜಾಸಾಮಗ್ರಿಗಳೊಡನೆ ನಿಂತಿರುವಳು. ರಾಜಪತ್ನಿಯು ಅವಳ ಪಕ್ಕದಲ್ಲಿರುವಳು. ಸುಮಂಗಲಿಯರೂ, ವೃದ್ಧತಾಪಸಿಯರೂ ನೆರೆದಿರುವರು.)

ರಾಜಪತ್ನಿ—ಕುಮಾರೀ ! ಗಂಧಪುಷ್ಪಾದಿಗಳಿಂದ ಕಲಶವನ್ನು ಪೂಜಿಸಿ, ಅಂಜಲಿಬಂಧಪೂರ್ವಕವಾಗಿ ನಿನ್ನ ಇಷ್ಟಸಿದ್ಧಿಯನ್ನು ಪ್ರಾರ್ಥಿಸು!

ಶ್ರೀಮತಿ—(ಪೂಜೆಯನ್ನು ಮುಗಿಸಿ ಕೈಮುಗಿದು ನಿಂತು ಪ್ರಾರ್ಥಿಸುವಳು.)

ಶ್ರೀರಾಗ - ಆದಿ - ತಾಳ.

ಪಾಲಿಸಾ । ಪಂಕಜನಾಭನ ರಾಣಿ । ಪಾಲಿಸಾ।ಗುಣಮಣಿ ಫಣಿವೇಣಿ।
ಪಾಲಿಸೆನ್ನ ಪ । ದ್ಮಾಲಯೆ ಸದಯೆ । ನೀಲವೇಣಿ ನವ । ಪಂಕಜಪಾಣಿ।
ಬಾಲಚಂದ್ರನಿಭ । ಫಾಲೆ ಸುಶೀಲೆ । ಪಾಲಿಸೆನ್ನ ನಿಗ । ಮಾಗಮವಿನುತೆ ॥ ೧ ॥
ಇಂದೀವರಾಕ್ಷೀ ಶ್ರೀವರಲಕ್ಷ್ಮಿ । ವಂದಾರುಜ । ನಾನಂದಕಟಾಕ್ಷಿ ।
ಕುಂದಕುಸುಮಕು । ಟ್ಮಲನಿಭರದನೆ । ಮಂದಹಾಸರುಚಿ। ಸುಂದರವದನೆ।
ಮಂದರಾದ್ರಿಧರ । ಹೃದಯೋಲ್ಲಾಸಿನಿ । ವಂದಿಸಿ ನಿನ್ನನು।ಬೇಡುವೆ ಜನನಿ॥ ೨॥
ಭಾಮಾಮಂ । ಡಲಮಣಿ ಮಂಜುಳವಾಣಿ । ಕಾಮಾರಿಕ।ರಾರ್ಚಿತೆ ಕಲ್ಯಾಣಿ।
ಸಾಮಜಗಾಮಿನಿ । ಕಾಮಿತದಾಯಿನಿ । ಕಾಮಜನನಿ ಕಲಿ । ಕಲ್ಮಷನಾಶಿನಿ ।
ಕಾಮಿತಾರ್ಥವಿ।ತ್ತೆನ್ನನು ಕಾಯೆ । ಕೋಮಲಾಂಗಿ ಕರು।ಣಾಲಯೆ ತಾಯೆ॥೩॥

(ಶ್ರೀಮತಿಯು ಹೀಗೆ ಸ್ತೋತ್ರವನ್ನು ಮಾಡಿ ನಮಸ್ಕರಿಸುವಳು)

(ಕಂಚುಕಿಯು ಪ್ರವೇಶಿಸುವನು.)

ಕಂಚುಕಿ—ದೇವಿ ! ಮಹಾರಾಜನು ಧರ್ಮಾಸನದಲ್ಲಿರುವನು! ದೇವರ್ಷಿಗಳಾದ ನಾರದಪರ್ವತರಿಬ್ಬರೂ, ರಾಜದರ್ಶನಾರ್ಥವಾಗಿ ಬಂದಿರುವರು. ಅಲ್ಲಿನ ರಾಜಕಾರ್ಯವು ಮುಗಿದಕೂಡಲೇ, ಮಹಾರಾಜನು ಬರುವನು. ಆ ಮಹರ್ಷಿಗಳನ್ನು ಮಾತ್ರ ಮುಂದಾಗಿಯೇ ಇಲ್ಲಿಗೆ ಕಳುಹಿಸಿ ಕೊಡುವುದಕ್ಕಾಗಿ, ಇಲ್ಲಿನ ಸಮಯವನ್ನು ತಿಳಿದುಬರುವಂತೆ ಹೇಳಿಕಳುಹಿಸಿರುವನು.

**ರಾಜಪತ್ನಿ**—(ಸಂತೋಷದಿಂದ) ಏನು ! ಮಹಾತ್ಮರಾದ ನಾರದಪರ್ವತರು ಬಂದಿರುವರೆ ! ಅವರನ್ನು ಕರೆತರುವುದಕ್ಕೆ ಸಮಯನಿರೀಕ್ಷಣೆ ಯೇನು? ಹೋಗು ! ಈಗಲೇ ಕರೆದುಕೊಂಡು ಬಾ (ಶ್ರೀಮತಿ ಯನ್ನು ನೋಡಿ)ವತ್ಸೆ ಏಳೇಳು! ಮಹಾತ್ಮರಾದ ನಾರದಪರ್ವತ ರಿಬ್ಬರೂ ಅತಿಥಿಗಳಾಗಿ ಬಂದಿರುವರಂತೆ ! ಲೋಕಪೂಜ್ಯರಾದ ಆ ಮಹರ್ಷಿಗಳಿಬ್ಬರೂ,ನಿನ್ನ ವ್ರತಸಮಾಪ್ತಿಕಾಲಕ್ಕೆ ಇಲ್ಲಿಗೆ ಬಂ ದುದು ನಮ್ಮ ಭಾಗ್ಯೋದಯವು!ಇಷ್ಟರಲ್ಲಿ ನೀನು ಈ ಸುಮಂ ಗಲಿಯರಿಗೆ ಕುಂಕುಮತಾಂಬೂಲಗಳನ್ನು ಕೊಟ್ಟು ಸತ್ಕರಿಸಿ ಕಳುಹಿಸು! ಈ ವೃದ್ಧಸುಮಂಗಲಿಯರಿಗೆ ನಮಸ್ಕರಿಸಿ, ಅಮೋ ಘವಾದ ಅವರ ಆಶೀರ್ವಾದಕ್ಕೆ ಪಾತ್ರಳಾಗು !

(ಶ್ರೀಮತಿಯು ಎಲ್ಲರಿಗೂ ಕುಂಕುಮತಾಂಬೂಲವನ್ನು ಕೊಟ್ಟು, ನಮಸ್ಕರಿಸುವಳು.)

(ಅವರಲ್ಲಿ ವೃದ್ಧತಾಪಸಿಯೊಬ್ಬಳು ಮುಂದೆ ಬಂದು ಆಶೀರ್ವದಿಸುವಳು.)

**ವೃದ್ಧತಾಪಸಿ**—

ಕಂ || ಕುಲವೃದ್ಧರ ಕುಲಗುರುಗಳ
ಕುಲದೇವತೆಯರ ನಿರಂತರಾನುಗ್ರಹದಿಂ |
ಎಲೆಸುತೆ! ನೀಂ ದೀರ್ಘಸುಮಂ
ಗಲಿಯಾಗಿ ಚಿರಾಯುವಾಗಿ ಸುಖದಿಂ ಬಾಳ್||

(ಸುಮಂಗಲಿಯರೆಲ್ಲರೂ ಅಕ್ಷತೆಯನ್ನು ಹಾಕುವರು. ಕಂಚುಕಿಯು ನಾರದಪರ್ವತರೊಡನೆ ಪ್ರವೇಶಿಸುವನು.)

**ಕಂಚುಕಿ**—ಪೂಜ್ಯರೆ ! ಇತ್ತ ದಯೆಮಾಡಬೇಕು! ಇದೇ ಮಹಾರಾಜನ ವಸಂತೋದ್ಯಾನವು.

(ನಾರದ ಪರ್ವತರಿಬ್ಬರೂ ಪ್ರವೇಶಿಸಿ, ಉದ್ಯಾನದ ಸೌಂದರ್ಯ ವನ್ನು ನೋಡುತ್ತಿರುವಾಗ, ಮನ್ಮಥನು ಧನುರ್ಬಾಣಗಳೊಡನೆ ಹಿಂದಿನಿಂದ ಬಂದು, ಅವರಮೇಲೆ ಪುಷ್ಪಬಾಣಗಳನ್ನು ಕರೆಯು ವನು.)

ನಾರದಂ—(ಪರ್ವತನ ಕೈಯನ್ನು ಹಿಡಿದು) ಮಿತ್ರನೆ ! ಈ ವನಸನ್ನಿವೇಶ ವನ್ನು ನೋಡಿದೆಯಾ ? ಇದು ಎಂತಹ ವಿರಕ್ತರಿಗೂ ವಿಷಯಾಭಿಲಾಷೆಯನ್ನು ಹುಟ್ಟಿಸುವಂತಿರುವುದು ನೋಡು !

ಪರ್ವತಂ—ಹೌದು ! ಇಲ್ಲಿಗೆ ಕಾಲಿಡುವಾಗಲೇ ನನ್ನ ಮನಸ್ಸಿಗೂ ಏನೋ ಒಂದುವಿಧವಾದ ವಿಕಾರವು ತೋರುತ್ತಿರುವುದು.

ನಾರದಂ—ಇದುವರೆಗೆ ನನ್ನ ಮನಸ್ಸಿಗೆ ಕೇವಲ ಅಸಹ್ಯವಾಗಿ ತೋರುತಿದ್ದ ಈ ಭೋಗಸಾಮಗ್ರಿಗಳೆಲ್ಲವೂ, ಇಲ್ಲಿ ಪ್ರಿಯವಾಗಿ ತೋರುತ್ತಿರುವುವಲ್ಲಾ ! ಇದೇನಾಶ್ಚರ್ಯವು!

ಪರ್ವತಂ—ಈ ಕಾರಣದಿಂದಲ್ಲವೇ ವಿರಕ್ತರಾದ ಯೋಗಿಗಳು, ಇಂತಹ ಭೋಗಸ್ಥಾನಗಳನ್ನು ಕಣ್ಣೆತ್ತಿಯೂ ನೋಡದೆ, ನಿರ್ಜನವಾದ ಕಾಡಿನಲ್ಲಿದ್ದು ಕಾಲವನ್ನು ಕಳೆಯುತ್ತಿರುವರು.

ನಾರದಂ—ಹೌದು ! ನಿಜವೆ! ಈ ಉದ್ಯಾನದ ಒಂದೊಂದು ಸನ್ನಿವೇಶವೂ ಮನಸ್ಸನ್ನಾಕರ್ಷಿಸುತ್ತಿರುವುದು.

ರಾಗ - ಕೇದಾರ - ರೂಪಕತಾಳ.

ಅಂದಮಾಗಿ|ತೋರ್ಪುದೀವನವು । ನರೆ ನೋಡು ನೋಡು ನೀ ॥ ನಂದ ॥
ಅಂದ|ಮಾದಳಿ । ವೃಂದ|ಝೇಂಕೃತಿ । ಯಿಂದ|ವೊಪ್ಪುವುದೀ ।
ವರ । ಸುಂದ|ರೀವದ । ನೇಂದು|ಬಿಂಬದೋ ।
ಲಂದ|ಮಾದರ । ವಿಂದಬೃಂದದಿ ॥ ನಂದ ॥ ೧ ॥
ಶೀತ|ಲಾಂಬುಸ । ಮೇತಮಾಗಿಹ । ವಾತ|ವೀಜನದಿಂ|
ಪರಿ! ಧೂತ|ಮಾಗಿಹ । ಕೇತಕೀಸುಮ ।
ವ್ರಾತದಿಂವತಿ! ರಮ್ಯಮಾದುದು॥ ೨ ॥
ಪಾರಿಜಾತದ । ಸೌರಭಂಗಳ । ಸಾರಮೀ ವನದೊಳ್ ।
ಮಿತಿ । ಮೀರಿ|ಸೌಖ್ಯವ । ನೀರ|ರೆದೆಗೆ ।
ಬೀರು|ವಂತಿರೆ । ತೋರು|ತಿರ್ಪುದು ॥ ಅಂದ ॥ ೩ ॥

ಪರ್ವತಂ—ಮಿತ್ರನೆ ! ನೀನು ಹೇಳಿದುದು ನಿಜ ! ಇಂತಹ ದಿವ್ಯೋದ್ಯಾನಗಳಲ್ಲಿ ವಿಹರಿಸತಕ್ಕ ಸಂಸಾರಿಗಳೇ ಭಾಗ್ಯಶಾಲಿಗಳೆಂದು ತೋರುತ್ತಿರುವುದು.

**ನಾರದಂ**—ಮಿತ್ರನೆ! ಕಾಮೋದ್ದೀಪಕಗಳಾದ ಈ ಸನ್ನಿವೇಶಗಳನ್ನು ನೋಡುತಿದ್ದಷ್ಟೂ ಮನಸ್ಸು ಕೆಟ್ಟುಹೋಗುವುದು. ಇವೆಲ್ಲವೂ ನಮ್ಮ ವಿರಕ್ತಿಮಾರ್ಗಕ್ಕೆ ಪ್ರತಿಬಂಧಕಗಳು. ಇವುಗಳನ್ನು ನೋಡುತ್ತಿರಬಾರದು. ಬಾ! ಮುಂದಿನ ಕಾರ್ಯವನ್ನು ನೋಡುವೆವು. (ಸ್ವಲ್ಪಮುಂದೆ ಹೋಗಿ) ಆಹಾ! ಈ ಕಮಲಸರೋವರದಲ್ಲಿ ಚಕ್ರವಾಕಪಕ್ಷಿಯು, ಆಗಾಗ ತನ್ನ ಪ್ರಿಯೆಯನ್ನು ಮುದ್ದಿಸುತ್ತ, ಎಷ್ಟುಸಂತೋಷದಿಂದಿರುವುದು ನೋಡು!

**ಪರ್ವತಂ**—ನಾನೂ ಅದನ್ನೇ ನೋಡುತ್ತಿರುವೆನು. ಛೀ! ವಿರಕ್ತರಾದ ನಮಗೆ ಇವುಗಳಿಂದೇನು! ಮುಂದೆ ಬಾ! (ಮುಂದೆ ಹೋಗಿ) ಮಿತ್ರನೆ! ಈ ಲತಾಗೃಹವನ್ನು ನೋಡಿದೆಯಾ! ಇಲ್ಲಿ ಸ್ತ್ರೀಸಮೇತರಾಗಿ ವಿಹರಿಸತಕ್ಕವರು ಎಷ್ಟು ಧನ್ಯರೋ!

**ನಾರದಂ**—ಅಂತವರು ಪರಮಭಾಗ್ಯಶಾಲಿಗಳೆಂಬುದನ್ನು ಕೇಳಬೇಕೆ?

(ಹಿಂದಿನಿಂದ ರಾಜನು ಪ್ರವೇಶಿಸುವನು.)

**ರಾಜಂ**—ಪೂಜ್ಯರೆ! ಇತ್ತ ದಯೆಮಾಡಿಸಿ ಈ ಪೀಠವನ್ನಲಂಕರಿಸಬೇಕು.

(ನಾರದಪರ್ವತರಿಬ್ಬರೂ ಕುಳ್ಳಿರುವರು.)

**ರಾಜಂ**—(ಶ್ರೀಮತಿಯನ್ನು ಕರೆದು) ಕುಮಾರೀ! ಇದೋ! ಲೋಕಪೂಜ್ಯರಾದ ನಾರದಪರ್ವತರಿಬ್ಬರೂ ನಮ್ಮ ಭಾಗ್ಯೋದಯದಿಂದ ನಿನ್ನ ವ್ರತಸಮಾಪ್ತಿಕಾಲಕ್ಕೆ ಸರಿಯಾಗಿ ಅತಿಥಿಗಳಾಗಿ ಬಂದಿರುವರು. ಇವರ ಪಾದಾಭಿವಂದನವನ್ನು ಮಾಡಿ, ಅವರ ಅಮೋಘವಾದ ಆಶೀರ್ವಾದಕ್ಕೆ ಪಾತ್ರಳಾಗು!

**ರಾಜಂ**—ಪೂಜ್ಯರೆ! ಈಕೆಯೇ ನನ್ನ ಮಗಳು! ಅನುಗ್ರಹಿಸಬೇಕು.

**ನಾರದಂ**—ಕುಮಾರೀ! ಉತ್ತಮಪತಿಯನ್ನು ಹೊಂದುವಳಾಗು.

**ಪರ್ವತಂ**—ದೀರ್ಘಸುಮಂಗಲೀ ಭವ! (ಕೈಯೆತ್ತಿ ಆಶೀರ್ವದಿಸುವರು.)

(ಶ್ರೀಮತಿಯು ಎದ್ದು ನಿಂತಮೇಲೆ, ನಾರದಪರ್ವತರಿಬ್ಬರೂ ಅವಳ ರೂಪಾತಿಶಯವನ್ನು ನೋಡಿ ಬೆರಗಾಗುವರು)

**ಪರ್ವತಂ**—(ಸ್ವಗತಂ) ಆಹಾ! ಏನೀ ಅದ್ಭುತಸೌಂದರ್ಯವು!

ಕಂ || ಇವಳೇಂ ಮನ್ಮಥರಾಜನ
ನವಮೋಹನಮಂತ್ರವಿದ್ಯೆಯೋ! ಮಾನವರೂ
ಪವನಾಂತ ವಿಷ್ಣುಮಾಯೆಯೊ!
ಭುವನತ್ರಯಭಾಗ್ಯಲಕ್ಷ್ಮಿಯೋ! ನಾನರಿಯೆಂ||

ಇವಳ ರೂಪಲಾವಣ್ಯಗಳನ್ನು ನೋಡಿದರೆ ಸಾಮಾನ್ಯಮನುಷ್ಯಸ್ತ್ರೀಯಂತೆ ತೋರುವುದಿಲ್ಲ! ಆಹಾ! ಇವಳ ಅಸಾಧಾರಣಸೌಂದರ್ಯವು ನನ್ನ ಮನಸ್ಸನ್ನೂ ಮೋಹಪಾಶದಲ್ಲಿ ಕಟ್ಟಿಬಿಡುವಂತೆ ತೋರುವುದಲ್ಲಾ! ಆದರೇನು? ಇರಲಿ! ಕಾಲವಶದಿಂದ ಎಂತಹ ವಿರಕ್ತರಾದವರೂ ಮನಸ್ಸು ಕಲಗುವುದುಂಟು! ಅಂತಹ ಸ್ಥಿತಿಯಲ್ಲಿಯೂ ಇಂದ್ರಿಯಚಾಪಲ್ಯಕ್ಕೊಳಗಾಗದಂತೆ ಮನಸ್ಸನ್ನು ತಡೆದಿಡುವುದೇ ಜಿತೇಂದ್ರಿಯರ ಲಕ್ಷಣವಲ್ಲವೆ? ಇದಕ್ಕಾಗಿ ಧೈರ್ಯಗೆಡಬಾರದು. (ಪ್ರಕಾಶಂ) ರಾಜೇಂದ್ರ! ಈಕೆಯೇ ನಿನ್ನ ಮಗಳೆ?

ರಾಜಂ—ಪೂಜ್ಯರೆ! ಹೌದು! ಇವಳೇ ನನ್ನ ಮಗಳು.

ನಾರದಂ—(ಅವಳ ರೂಪಕ್ಕೆ ಬೆರಗಾಗಿ ಆಶ್ಚರ್ಯಪಡುತ್ತಾ) ರಾಜಾ! ಇವಳಿಗಾಗಿಯೇ ನಿನ್ನ ವರಾನ್ವೇಷಣಪ್ರಯತ್ನವಲ್ಲವೆ?

ರಾಜಂ—ಹೌದು! ಇವಳಿಗಾಗಿಯೇ!

ನಾರದಂ—ರಾಜಾ! ನೀನು ಈ ಕನ್ಯೆಗೆ ತಕ್ಕ ವರನಿಲ್ಲವೆಂದು ಚಿಂತಿಸುವುದು ಯುಕ್ತವೇ! ಇವಳ ರೂಪಲಾವಣ್ಯಸಂಪತ್ತಿಯನ್ನು ನೋಡಿದರೆ, ಈ ಭೂಲೋಕದಲ್ಲಿಯಾಗಲಿ, ಕೊನೆಗೆ ದೇವಲೋಕದಲ್ಲಿಯಾಗಲಿ, ಇವಳಿಗೆ ಅನುರೂಪನಾದ ವರನು ಸಿಕ್ಕಲಾರನೆಂದೇ ನನಗೂ ತೋರುವುದು. ಅಷ್ಟೇಕೆ!

ವೃ|| ಅನುಪಮದಿವ್ಯಮೂರ್ತಿ! ಶುಭಕೀರ್ತಿ! ಸುರಾಸುರಚಕ್ರವರ್ತಿಯೆಂ|
ದೆನೆ ನೆಗಳ್ದ ಮಹಾಪುರುಷನಲ್ಲದೆ, ಲೋಕದೊಳನ್ಯಪೂರುಷರ್|
ತನುಜೆಯಿನಳ್ಗೆ ತಕ್ಕ ವರಸಾಮ್ಯಮನೊಂದುವರಿಲ್ಲ! ನಿಶ್ಚಯಂ|
ಮನದನುಮಾನವಿಲ್ಲದೆ! ಬಿಡಿನ್ನು ವರಾನಯನಪ್ರಯತ್ನಮಂ ||

**ಪರ್ವತಂ**—ಹೌದು! ನಿಜ ! ನನಗೂ ಹಾಗೆಯೇ ತೋರುವುದು.

**ರಾಜಂ**—ಪೂಜ್ಯರೆ ! ನಾನು ಆಗಲೇ ಆ ಪ್ರಯತ್ನವನ್ನು ಬಿಟ್ಟು, ದೈವ ಸಂಕಲ್ಪವಿದ್ದಂತಾಗಲೆಂದು ಭಗವಂತನಮೇಲೆ ಭಾರವನ್ನಿಟ್ಟು ಸುಮ್ಮನಿರುವೆನು ! ಹಾಗಿದ್ದರೂ ಲೋಕಪದ್ಧತಿಯನ್ನನುಸರಿಸಿ, ಕನ್ಯೆಯರಿಗೆ ಅನುರೂಪನಾದ ವರನನ್ನು ಹುಡುಕಿ ವಿವಾಹಕಾರ್ಯವನ್ನು ನಿರ್ವಹಿಸತಕ್ಕ ಭಾರವು. ತಾಯಿತಂದೆಗಳಮೇಲೆ ಬಿದ್ದಿರುವುದರಿಂದ, ಅವಳ ವಿವಾಹಚಿಂತೆಯು ನನ್ನನ್ನು ಬಿಡದೆ ಬಾಧಿಸುತ್ತಿರುವುದು.

**ನಾರದಂ**—ಹೌದು ! ಅದೇನೋ ವಾಸ್ತವವೇ ! ಹಾಗಿದ್ದರೂ ನೀನು ಇದಕ್ಕಾಗಿ ಚಿಂತಿಸಿ ಕೊರಗುವುದರಿಂದ ಫಲವೇನು ? ರಾಜೇಂದ್ರಾ ! ಇವಳು ನಿನ್ನ ಗರ್ಭದಲ್ಲಿ ' ಹುಟ್ಟಿದ್ದರೂ, ಯಾವಳೋ ದೇವಾಂಶದವಳಾಗಿರಬೇಕೇಹೊರತು ಮನುಷ್ಯಕನ್ಯೆಯಂತೆ ನನ್ನ ಮನಸ್ಸಿಗೆ ತೋರಲಿಲ್ಲ ! ಏಕೆಂದರೆ.

ರಾಗ. ಕಲ್ಯಾಣಿ—ರೂಪಕ—ತಾಳ

ಲೋಕಮೋಹನೆಯೀ । ಮಾನಿನೀ ಮನೋಹಾರಿಣಿ ॥
ನಾಕಲೋಕದ ನಾರಿಯೋ । ನಾಗಕನ್ಯೆಯೊ ಲೋಕ॥ ೧॥
ಸರಸಿಜಾತ।ಸದೃಶನೇತ್ರೆ । ಸರಸಕೋಮಲ।ಮಂಜುಗಾತ್ರಿ ।
ನಿರುಪಮಲಾ।ವಣ್ಯಮೂರ್ತಿ । ನೀರೆ ನೀರಜಾನನೆ॥ ೨ ॥
ಕುಂದಕುಟ್ಮ।ಲಾಭರದನೆ । ಮಂದಹಾಸ।ರುಚಿರವದನೆ ।
ಸುಂದರೀಮಣಿ।ರತಿಯರೂಪವ । ಕುಂದುಗೊಳಿಪ। ಚಂದದಿಂದಲಿ॥೩॥

ಆದುದರಿಂದ ಓ ರಾಜೇಂದ್ರಾ ! ನಿನ್ನ ಭಾಗ್ಯಪರಿಪಾಪವೇ ಈ ಕನ್ಯಾರೂಪದಿಂದ ಹುಟ್ಟಿರಬೇಕೇಹೊರತು ಬೇರೆಯಲ್ಲ !

**ರಾಜಂ**—ಪೂಜ್ಯರೆ ! ಇವೆಲ್ಲವೂ ತಮ್ಮಂತಹ ಮಹಾತ್ಮರ ಅನುಗ್ರಹವಿಶೇಷವೆಂದೇ ಭಾವಿಸುವೆನು.

**ರಾಜಪತ್ನಿ**—ಲೋಕೋತ್ತರಸೌಂದರ್ಯವುಳ್ಳ ದೇವಾಂಗನೆಯರ ರೂಪವನ್ನೂ ಕೇವಲಹೇಯವಾಗಿ ಭಾವಿಸುತ್ತಿರುವ ನಿಮ್ಮಿಂದ, ಈ ನಮ್ಮ

ಕುಮಾರಿಯು ಇಷ್ಟು ಪ್ರಶಂಸಾರ್ಹಳಾದಮೇಲೆ,ಇವಳು ಪರಮ ಭಾಗ್ಯವತಿಯೆಂಬುದರಲ್ಲಿ ಸಂದೇಹವೇನಿದೆ?

ನಾರದಂ—(ಭಯದಿಂದ ತನ್ನಲ್ಲಿ ತಾನು)ಅಯ್ಯೋ! ಇದೇನು ? ಈ ಕನ್ನಿಕೆಯ ರೂಪಕ್ಕೆ ಮರುಳಾಗಿ, ನನ್ನನ್ನೇ ನಾನು ಮರೆತುಹೋದೆನಲ್ಲಾ! ನಿಜವಾಗಿಯೂ ಈ ಕನ್ಯೆಯ ರೂಪಲಾವಣ್ಯಗಳು ನನ್ನ ಮನಸ್ಸನ್ನು ಕಲಗಿಸಿ ಬಿಟ್ಟುವು. ಹೀಗೆಯೇ ಪ್ರಸ್ತಾವವಶದಿಂದ ನನ್ನ ಮನೋಭಿಪ್ರಾಯವು ಬಾಯಿಂದ ಹೊರಬಿದ್ದರೆ, ಆಗ ನಾನು ಇವರಮುಂದೆ ಕೇವಲ ಹಾಸ್ಯಾಸ್ಪದನಾಗುವೆನು. ಬೇರೆ ಯಾವುದಾದರೂ ವ್ಯಾಜಾಂತರದಿಂದ ಅದನ್ನು ಮರೆಸುವೆನು.

(ಪ್ರಕಾಶಂ)—ರಾಜೇಂದ್ರಾ! ಅದು ಹಾಗಿರಲಿ! ದೇವಾಂಗನೆಯರ ಹೆಸರನ್ನೆತ್ತಿದುದರಿಂದ ನೆನಪಿಗೆ ಬಂದಿತು. ನಾನು ನಿನಗೆ ಅವಶ್ಯವಾಗಿ ತಿಳಿಸಬೇಕೆಂದು ಬಂದ ಒಂದು ವೃತ್ತಾಂತವನ್ನು ಮರೆತಿದ್ದೆನು. ಈಗಲೇ ನಾನು ದೇವಸಭೆಯಿಂದ ಬರುವಾಗ,ಅಲ್ಲಿ ನಡೆದ ಒಂದು ಅಕ್ರಮವನ್ನು ನೋಡಿ,ನನ್ನ ಮನಸ್ಸಿಗೆ ಬಹಳ ಅಸಮಾಧಾನವಾಯಿತು. ಕುಲ, ರೂಪ, ಯೌವನ, ಧನಸಂಪತ್ತಿ, ಪ್ರಭುತ್ವ, ಮುಂತಾದ ವೈಭವಗಳಲ್ಲಿ ಯಾವುದೊಂದಿದ್ದರೂ, ಮನುಷ್ಯನಿಗೆ ವಿವೇಕಜ್ಞಾನವನ್ನು ಕೆಡಿಸಿ,ಅವನನ್ನು ಉನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವುದು ಸಹಜವು! ಈ ಸಮಸ್ತಭಾಗ್ಯಗಳೂ ನಿನ್ನಲ್ಲಿ ಒಂದಾಗಿ ಕಲೆತಿರುವಾಗಲೂ, ನೀನು ಸನ್ಮಾರ್ಗವನ್ನು ಬಿಡದೆ ಜಿತೇಂದ್ರಿಯನಾಗಿ, ಕೇವಲ ವಿಷ್ಣುಭಕ್ತಿಪರಾಯಣನಾಗಿರುವುದು ಎಂತವರಿಗೂ ಆಶ್ಚರ್ಯವನ್ನುಂಟುಮಾಡದಿರಲಾರದು.

ಪರ್ವತಂ—ಇದರಮೇಲೆ, ರೂಪಲಾವಣ್ಯಗಳಿಂದ ಲೋಕಮೋಹನೆಯಾದ ಇಂತಹ ಕನ್ಯಾರತ್ನವು ಭಾಗ್ಯಲಕ್ಷ್ಮಿಯಂತೆ ಮನೆಯಲ್ಲಿ:— (ಎಂದು ಅರ್ಧೋಕ್ತಿಯಲ್ಲಿ ಭಯದಿಂದ ತನ್ನಲ್ಲಿ ತಾನು.) ಆಹಾ! ಇದೇನು!ಅಸಂದರ್ಭವಾಗಿ ನಾನು ಈಕೆಯ ರೂಪವನ್ನು ವರ್ಣಿ

ಸುವುದಕ್ಕಾರಂಭಿಸಿದೆನು! ಛೀ! ಈ ವ್ಯಕ್ತಿಯು ಕಣ್ಣಿಗೆ ಬೀಳುತ್ತಿರುವವರೆಗೂ, ಮೋಹಾಕುಲವಾದ ನನ್ನ ಮನಸ್ಸನ್ನು ತಡೆಯಲಾರೆನು. ಆದುದರಿಂದ ಏನಾದರೂ ವ್ಯಾಜಾಂತರವನ್ನು ಹೇಳಿ, ಸ್ವಲ್ಪಹೊತ್ತಿನವರೆಗೆ ಬೇರೆಲ್ಲಿಯಾದರೂ ಹೋಗಿ ಬರುವೆನು.ಹಾಗಿಲ್ಲದಿದ್ದರೆ, ಇವರೆಲ್ಲರ ಮುಂದೆ ನನ್ನ ಸ್ಥಿತಿಯು ಕೇವಲಹಾಸ್ಯಾಸ್ಪದವಾಗುವುದು. (ಪ್ರಕಾಶಂ) ಮಹಾರಾಜಾ! ಈಗ ನಾರದನು ಹೇಳುತ್ತಿರುವ ಇಂದ್ರಸಭಾವೃತ್ತಾಂತವು ನೀನು ಅವಶ್ಯವಾಗಿ ಕೇಳಬೇಕಾದುದೇ! ನಾನೂ ಇಷ್ಟರಲ್ಲಿ ಈ ನಿನ್ನ ಉದ್ಯಾನವನ್ನು ಸುತ್ತಿ ನೋಡಿಬರುವೆನು.

ರಾಜಂ—ಪೂಜ್ಯರ! ತಡೆಯೇನು? ಯಥೇಷ್ಟವಾಗಿ ಸುತ್ತಿ ನೋಡಬಹುದು.

(ಪರ್ವತನು ಹೊರಟುಹೋಗುವನು.)

ರಾಜಂ—(ಆತುರದೊಡನೆ) ಮುನೀಂದ್ರಾ! ಅದೇನು? ಹಾಗೆ ತಮ್ಮ ಮನಸ್ಸಿಗೆ ಅಸಮಾಧಾನವುಂಟಾಗುವಂತೆ ಇಂದ್ರಸಭೆಯಲ್ಲಿ ನಡೆದ ಅಕ್ರಮವೇನು?

ನಾರದಂ—ಅದನ್ನೇ ಹೇಳುವೆನು ಕೇಳು! ದೇವೇಂದ್ರನು ನಿನ್ನೆರಾತ್ರಿ, ಶಾರದೋತ್ಸವವನ್ನಾರಂಭಿಸಿ, ಅದರ ಕಾರ್ಯನಿರ್ವಾಹಕ್ಕಾಗಿ ಮನ್ಮಥನನ್ನು ನಿಯಮಿಸಿದ್ದನು.

ರಾಜಂ—ಆಯಿತು! ಆಮೇಲೆ?

ನಾರದಂ—ಆ ಉತ್ಸವವೈಭವವನ್ನು ನೋಡುವುದಕ್ಕಾಗಿ, ಇಷ್ಟಮಿತ್ರರೆಲ್ಲರನ್ನೂ ಕರೆಸಿದ್ದನು.

ರಾಜಂ—ನ್ಯಾಯವೇ!

ನಾರದಂ—ನಾನೂ ಅದನ್ನು ನೋಡಬೇಕೆಂಬ ಕುತೂಹಲದಿಂದ ಅಲ್ಲಿಗೆ ಹೋದೆನು. ಹೀಗೆ ದೊಡ್ಡದೇವಸಭೆಯು ನೆರೆದಿರುವಾಗ, ಇಂದ್ರನು ಆ ಮನ್ಮಥನ ಕಾರ್ಯನಿರ್ವಾಹನೈಪುಣ್ಯವನ್ನು ನೋಡಿ ಸಂತೋಷಪರವಶನಾಗಿ,ಅವನನ್ನು ಕರೆತಂದು,ತನ್ನ ಅರ್ಧಾಸನದಲ್ಲಿ

ಕುಳ್ಳಿರಿಸಿ, ಅವನ ಕಂಠಕ್ಕೆ ಮಂದಾರಮಾಲಿಕೆಯನ್ನು ಹಾಕಿ, ಅಗ್ರಪೂಜೆಯನ್ನೂ ಮಾಡಿದನು.

ರಾಜಂ—(ಆಶ್ಚರ್ಯದಿಂದ) ಏನು ? ದೇವೇಂದ್ರನು ಮನ್ಮಥನನ್ನು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿದನೆ ? ಮಹಾತ್ಮರಾದ ನೀವೆಲ್ಲರೂ ನೆರೆದಿರುವಾಗ, ಅಗ್ರಪೂಜೆಯನ್ನು ಮಾಡಿದನೆ ? ವಿಷಯಸುಖದಲ್ಲಿ ಮುಳುಗಿ ಮೈಮರೆತಿರುವಾಗ, ವಿವೇಕಜ್ಞಾನವು ಕೆಡುವುದೆಂಬ ಮಾತು ನಿಜವೇ! ಈ ಸಾಮ್ರಾಜ್ಯಪದವಿಯಲ್ಲಿ ನಾನಾಕಡೆಯಿಂದ ಇಂದ್ರಿಯಗಳನ್ನೆಳೆದು ಮನಸ್ಸನ್ನು ಕೆಡಿಸತಕ್ಕ ಭೋಗಸಾಮಗ್ರಿಗಳು ತುಂಬಿದ್ದರೂ, ತಮ್ಮಂತಹ ಮಹಾತ್ಮರ ಅನುಗ್ರಹದಿಂದಲೂ, ಭಗವತ್ಕೃಪೆಯಿಂದಲೂ, ನನ್ನ ಮನಸ್ಸು ಹೀಗೆ ಮೋಹಾಕುಲವಾಗದಿರಬೇಕೆಂಬುದೇ ನನ್ನ ಕೋರಿಕೆ !

ನಾರದಂ—(ಲಜ್ಜೆಯಿಂದ ಸ್ವಗತಂ) ಅಯ್ಯೋ! ಈ ರಾಜನು ತನ್ನ ಮನಸ್ಸು ಸಿಷ್ಕಲ್ಮಷವಾಗಿರುವುದಕ್ಕೆ, ನನ್ನ ಅನುಗ್ರಹವನ್ನು ಕಾರಣವಾಗಿ ಹೇಳುತ್ತಿರುವನು ಈಗ ನಾನೇ ಕಾಮಪರವಶನಾಗಿ ಕಳವಳಿಸುತ್ತಿರುವೆನಲ್ಲಾ ! (ಪ್ರಕಾಶಂ) ರಾಜೇಂದ್ರಾ! ಅಮರಮೇಲೆ ನನಗೆ ಅಲ್ಲಿ ನಿಲ್ಲುವುದಕ್ಕಿಷ್ಟವಿಲ್ಲದೆ, ಇಲ್ಲಿ ನಿನ್ನನ್ನು ನೋಡಿಹೋಗುವುದಕ್ಕಾಗಿ ಬಂದೆನು

ರಾಜಂ—ಇದು ನನ್ನ ಭಾಗ್ಯವಿಶೇಷವು !

(ಕಂಚುಕಿಯು ಪ್ರವೇಶಿಸುವನು.)

ಕಂಚುಕಿ—ಮಹಾರಾಜನಿಗೆ ಜಯವಾಗಲಿ ! ವ್ರತಾನಂತರದಲ್ಲಿ ಶ್ರೀಮತೀಕುಮಾರಿಯನ್ನು, ಗೃಹದೇವತಾಸಾನ್ನಿಧ್ಯಕ್ಕೆ ಕರೆತರುವಂತೆ ಕುಲಗುರುಗಳಾದ ವಸಿಷ್ಠರ ಆಜ್ಞೆಯಾಗಿರುವುದು.

ರಾಜಂ—(ಎದ್ದು ನಿಂತು) ಇದೋ ! ಈಗಲೇ ಬರುತ್ತಿರುವೆನೆಂದು ತಿಳಿಸು ಹೋಗು! (ನಾರದನನ್ನು ನೋಡಿ) ಪೂಜ್ಯರ ! ಅನುಜ್ಞೆಯನ್ನು ಕೊಡಬೇಕು !

ನಾರದಂ—(ಸಂತೋಷದಿಂದ ಸ್ವಗತಂ) ಆಹಾ ! ನಾನು ಇವರ ಕಣ್ಮರೆಯಾಗಿರುವುದಕ್ಕೆ ದೈವಾಧೀನದಿಂದ ಇದೊಂದು ನೆಪವು ಏರ್ಪಟ್ಟಿತು ! ನಾನು ಈ ಕನ್ಯೆಯನ್ನು ನೋಡುತ್ತ, ಇಲ್ಲಿಯೇ ಇರುತ್ತಿದ್ದರೆ, ಕಾಮಪರವಶನಾದ ನನ್ನ ಮನೋಭಿಪ್ರಾಯವು ಹೇಗಾದರೂ ಹೊರಬಿದ್ದು, ನನ್ನ ಸ್ಥಿತಿಯು ಕೇವಲಹಾಸ್ಯಾಸ್ಪದವಾಗುವುದು. ಸ್ವಲ್ಪಹೊತ್ತಿನವರೆಗೆ ವಿವಿಕ್ತವಾಗಿದ್ದ ಹೊರತು ಈ ವ್ಯಾಮೋಹವನ್ನು ತಪ್ಪಿಸುವುದು ಸಾಧ್ಯವಲ್ಲ. (ಪ್ರಕಾಶಂ) ರಾಜೇಂದ್ರಾ ! ವ್ರತಸಮಾಪ್ತಿಯಲ್ಲಿ ಗೃಹದೇವತಾ ನಮಸ್ಕಾರವು ಅವಶ್ಯವಾಗಿ ನಡೆಸಬೇಕಾದ ಕಾರ್ಯವೇ ! ಇನ್ನು ನೀವು ಹೊರಡಿರಿ !

ರಾಜಂ—ತಾವೂ ಬಂದು ನಮ್ಮ ಗೃಹದಲ್ಲಿ ಆತಿಥ್ಯವನ್ನು ಸ್ವೀಕರಿಸಿ ಹೋಗಬೇಕು.

ನಾರದಂ—ನಾನು ದೂರಪ್ರಯಾಣದಿಂದ ಬಹಳವಾಗಿ ಬಳಲಿರುವೆನು. ಸ್ವಲ್ಪಹೊತ್ತು ಇಲ್ಲಿಯೇ ವಿಶ್ರಮಿಸಿಕೊಂಡಿದ್ದು, ನನ್ನ ಮಿತ್ರನಾದ ಪರ್ವತನು ಬಂದಮೇಲೆ, ನಾವಿಬ್ಬರೂ ಸೇರಿಯೇ ನಿನ್ನಲ್ಲಿಗೆ ಬರುವೆವು.

ರಾಜಂ—ತಮ್ಮ ಇಷ್ಟದಂತೆಯೇ ಆಗಲಿ ! ತಮ್ಮನ್ನು ಕರೆದುಕೊಂಡುಹೋಗುವುದಕ್ಕಾಗಿ, ನಾನೇ ಮತ್ತೊಮ್ಮೆ ಇಲ್ಲಿಗೆ ಬರುವೆನು. ಅದುವರೆಗೆ ತಾವುಇಲ್ಲಿ ಸುಖವಾಗಿ ವಿಶ್ರಾಂತಿಯನ್ನು ತೆಗೆದುಕೊಳ್ಳಬಹುದು! ಕುಮಾರೀ ! ಬಾ ! ಹೋಗುವೆವು.

(ನಾರದನೊಬ್ಬನುಹೊರತು ಉಳಿದವರೆಲ್ಲರೂ ಹೋಗುವರು.)

ನಾರದಂ—(ಅತ್ತಿತ್ತ ತೆರೆಯಕಡೆಗೆ ನೋಡಿ ನಿಟ್ಟುಸಿರನ್ನು ಬಿಟ್ಟು) ಆಹಾ! ಈಗಲೀಗ ಸ್ವಲ್ಪವಾದರೂ ಮನಸ್ಸಿಗೆ ನೆಮ್ಮದಿಯಾಯಿತು ! ಆ ರಾಜಕುಮಾರಿಯನ್ನು ನೋಡಿದುದು ಮೊದಲು, ನನ್ನ ಮನಸ್ಸು ಒಂದು ನೆಲೆಯಲ್ಲಿಲ್ಲದೆ ಕಳವಳಿಸುತ್ತಿರುವುದು! ಈ ಕಾಮವಿಕಾರದಿಂದ ನನ್ನನ್ನೇ ನಾನು ಮರೆತುಹೋಗಿರುವೆನು. ಜನಸಂಪರ್ಕವೇ

ಇಲ್ಲಡೆ ವಿವಿಕ್ತವಾದ ಸ್ಥಳದಲ್ಲಿದ್ದಾದರೂ, ಕಾಮಾಕುಲವಾದ ಈ ನನ್ನ ಮನಸ್ಸನ್ನು ಸರಿಯಾದ ಮಾರ್ಗಕ್ಕೆ ತಿರುಗಿಸುವ ಯತ್ನವನ್ನು ಮಾಡುವೆನು. (ಆಸನದಮೇಲೆ ಕುಳಿತು, ಸ್ವಲ್ಪಹೊತ್ತಿನವರೆಗೆ ಚಿಂತಿಸಿ) ಆಹಾ ! ಹೀಗೇಕೆ ನನ್ನ ಬುದ್ಧಿಯು ವಿಪರೀತವಾಗಿ ಪ್ರವರ್ತಿಸಿತು ! ದೇವಸಭೆಯಲ್ಲಿ ರೂಪಲಾವಣ್ಯಗಳಿಂದ ಲೋಕಪ್ರಖ್ಯಾತರಾದ ರಂಭೆ, ಊರ್ವಶಿ, ತಿಲೋತ್ತಮೆ, ಮೊದಲಾದ ಅಪ್ಸರಸ್ತ್ರೀಯರಮುಂದೆ ನಿಂತು, ಅನೇಕಾವರ್ತಿ ಅವರ ಗಾನನರ್ತನಗಳನ್ನು ನೋಡುತ್ತಿದ್ದಾಗಲೂ ಸ್ವಲ್ಪಮಾತ್ರವೂ ಕದಲದ ನನ್ನಮನಸ್ಸು, ಈ ಸ್ತ್ರೀವ್ಯಕ್ತಿಯನ್ನು ಒಂದಾವರ್ತಿ ನೋಡಿದಮಾತ್ರಕ್ಕೆ, ಹಿಂದೆ ಯಾವಾಗಲೂ ಕಂಡುಕಾಣದ ಕಾಮವಿಕಾರದಿಂದ ಕುದಿಯುತ್ತಿರುವುದಲ್ಲಾ ! ಆ ಕನ್ಯೆಯು ಸಾಮಾನ್ಯಸ್ತ್ರೀಯಾಗಿದ್ದರೆ, ಎಂದಿಗೂ ಹೀಗಾಗಲಾರದು ! ಲೋಕದಲ್ಲಿ ನನಗಿಂತಲೂ ವಿರಕ್ತರಿಲ್ಲವೆಂದು ತಿಳಿದಿದ್ದ ನನ್ನಗರ್ವವನ್ನು ಮುರಿಯಬೇಕೆಂದೆಣಿಸಿ, ನನ್ನನ್ನು ಮೋಹಪಾಶದಲ್ಲಿ ಕಟ್ಟಿಡುವುದಕ್ಕಾಗಿ ಭಗವನ್ಮಾಯೆಯೇ ಈ ಆಕಾರದಿಂದ ನನ್ನಕಣ್ಣಿಗೆ ಕಾಣಿಸಿರಬಹುದೆ? ಹೌದು ! ಹಾಗೆಯೇ ಇರಬೇಕು ! ಸಂದೇಹವಿಲ್ಲ! ನಾನು ತ್ರಿಲೋಕಸಂಚಾರಿಯಾಗಿ, ಸರ್ವಾತಿಶಯವಾದ ರೂಪಸೌಂದರ್ಯಗಳನ್ನು ನೋಡಿದ್ದರೂ, ಮೋಹಾಕುಲವಾಗದ ನನ್ನ ಮನಸ್ಸು, ಈಗ ಅಕಸ್ಮಾತ್ತಾಗಿ ಈಸ್ಥಿತಿಯನ್ನು ಹೊಂದಬೇಕಾದರೆ, ಇದು ಭಗವನ್ಮಾಯೆಯೆಂಬುದರಲ್ಲಿ ಸಂದೇಹವೇನಿದೆ ? ಈಗ ನಾನು ಯಾವವಿಧದಲ್ಲಿ ನನ್ನಮನಸ್ಸನ್ನು ಶಾಂತಿಹೊಂದಿಸಲಿ! (ಚಿಂತಿಸುತ್ತ) ಯಾವ ವಿಧದಿಂದಲೂ ಸಾಧ್ಯವಲ್ಲ ? ಆಹಾ! ಸಮಸ್ತಲೋಕಕ್ಕೂ ವಿಷಯವೈರಾಗ್ಯವನ್ನುಪದೇಶಿಸತಕ್ಕ ನಾನೇ ಹೀಗೆ ಕಾಮಪಾಶದಲ್ಲಿ ಕಟ್ಟುಬಿದ್ದಮೇಲೆ,ಈ ನನ್ನ ವೇಷಗಳೆಲ್ಲವೂ ಕೇವಲ ಕಪಟವೆನಿಸುವುದಿಲ್ಲವೆ?

ವೃ॥ ಎನಗೀ ಶುದ್ಧಜಪಾಕ್ಷಮಾಲೆ ಕರದೊಳ್!ವ್ಯಕ್ತೋರ್ಧ್ವಪುಂಡ್ರಂಗಳಾ ।
ನನೆದೊಳ್! ಮಸ್ತಕದಲ್ಲಿ ದುರ್ಭರಜಟಾಭಾರಂ! ತಪೋವೇಷಮಿಂ।
ತಿನಿತಂ ಬಾಹ್ಯವಿಡಂಬಮಲ್ತೆ! ಮದನವ್ಯಾಮೋಹಿತಾತ್ಮಂಗೆ!ಕಾಂ ।
ಚನದಿಂದೊಪ್ಪಮನಿಟ್ಟ ಕರ್ಬುನದವೋಲಾಯ್ತೆನ್ನ ಬಾಳಕ್ಕಟಾ! ॥

ಆಹಾ ! ಮುಖ್ಯವಾಗಿ ಮನ್ಮಥನು ನನ್ನನ್ನು ಕಾಮಪಾಶದಲ್ಲಿ ಕಟ್ಟಿಬಿಟ್ಟನು! ಜಿತೇಂದ್ರಿಯನೆಂದು ಲೋಕಪ್ರಸಿದ್ಧವಾದ ನನ್ನ ಖ್ಯಾತಿಗೆ ಕುಂದಕವುಂಟಾಗಿ,ಎಲ್ಲರಿಗೂ ನಾನು ಹಾಸ್ಯಾಸ್ಪದನಾಗುವ ಕಾಲವೂ ಬಂದಂತೆ ತೋರುವುದು ! ಆಪರ್ವತನೂ ನನ್ನಂತೆ ಇವಳ ರೂಪವನ್ನು ಕಣ್ಣಾರೆ ನೋಡಿದವನಾದರೂ,ಅವನು,ಈ ಆವಸ್ಥೆಗೊಳಗಾದಂತೆ ತೋರಲಿಲ್ಲ!ವಿರಕ್ತಿಮಾರ್ಗಕ್ಕೆ ನನ್ನನ್ನೇ ಮೇಲುಪಜ್ತಿಯೆಂದು ತಿಳಿದು, ನನ್ನ ಮಾರ್ಗವನ್ನು ಹಿಂಬಾಲಿಸುತಿದ್ದ ಆ ಪರ್ವತನು, ಈಗ ನನ್ನ ಸ್ಥಿತಿಯನ್ನು ತಿಳಿದರೆ, ಎಷ್ಟು ಹಾಸ್ಯಮಾಡುವನು! ಈಗ ಯಾವ ಉಪಾಯದಿಂದ ಮೋಹಾಕುಲವಾದ ಈ ಮನಸ್ಸನ್ನು ನಿಗ್ರಹಿಸಲಿ ! (ಚಿಂತೆಯಿಂದ ನಿಟ್ಟುಸಿರನ್ನು ಬಿಟ್ಟು)ಯಾವ ಉಪಾಯದಿಂದಲೂ ಸಾಧ್ಯವೆಂದು ತೋರಲಿಲ್ಲ!ಅಥವಾ ಇದಕ್ಕಾಗಿ ನಾನೇಕೆ ಚಿಂತಿಸಬೇಕು ! ಆ ಭಗವಂತನ ಸಂಕಲ್ಪಕ್ಕನುಸಾರವಾಗಿ ಮನುಷ್ಯನ ಮನಸ್ಸು ಪ್ರೇರಿಸಲ್ಪಡುವುದೇಹೊರತು, ಯಾವ ಪ್ರಾಣಿಗಳೂ,ಯಾವವಿಷಯದಲ್ಲಿಯೂ ಸ್ವತಂತ್ರವಲ್ಲ ! ಇದುವರೆಗೆ ಎಂತಹ ವಿಷಯಗಳಲ್ಲಿಯೂ ಮನಸ್ಸು ಕಲಗದೆ,ಜಿತೇಂದ್ರಿಯನಾಗಿದ್ದ ನನಗೆ,ಈಗ ಈ ಕಾಮೋದ್ರೇಕವುಂಟಾಗಬೇಕಾದರೆ, ಇದು ದೈವವ್ಯಾಪಾರವಲ್ಲದೆ ಬೇರೇನು? ಮುಂದೆ ನನಗೋ, ಅಥವಾ ಇತರರಿಗೋ ಕ್ಷೇಮಕ್ಕಾಗಿಯೇ ಹೀಗೆ ನನ್ನ ಬುದ್ಧಿಯು ಚಲಿಸಿದ್ದರೂ ಇರಬಹುದು! ಲೋಕದಲ್ಲಿ ಮನುಷ್ಯನ ಬುದ್ಧಿಯನ್ನು ಕೆಡಿಸುವುದಕ್ಕೆ ಇದಕ್ಕಿಂತಲೂ ಹೀನವಾದ ಎಷ್ಟೋ ಕಾರಣಗಳುಂಟು. ಈಗ ನನ್ನ ಸ್ಥಿತಿಯು ಹಾಗಲ್ಲ ! ಮತ್ತೊಬ್ಬನಿಗೆ ವಿವಾಹಿತೆಯಾದ ಕನ್ಯೆಯನ್ನು

ನೋಡಿ ನಾನು ಕಾಮಿಸಿದವನಲ್ಲ! ಅಥವಾ ನನಗೆ ಮೊದ ಲಿದ್ದ ಒಬ್ಬಳು ಪತ್ನಿಯನ್ನು ವಂಚಿಸಿ, ಬೇರೊಬ್ಬಳನ್ನು ಕಾ ಮಿಸಿದವನಲ್ಲ! ಆ ರಾಜಕುಮಾರಿಯು ಅವಿವಾಹಿತಳಾದ ಕನ್ಯೆ! ನಾನೋ ಬ್ರಹ್ಮಚಾರಿ! ಈ ವಿವಾಹದಲ್ಲಿ ತಪ್ಪೇನು? ಪರಸ್ತ್ರೀಕಾಮುಕರಾಗಿ ಪ್ರವರ್ತಿಸುವವರಿಗಿಂತಲೂ, ನನ್ನ ಸ್ಥಿತಿ ಯೇ ಮೇಲಲ್ಲವೆ? ಮನುಷ್ಯನ ಮನಸ್ಸನ್ನು ಉನ್ಮಾರ್ಗದಲ್ಲಿ ಪ್ರವರ್ತಿಸದಂತೆ ತಡೆದಿಡುವುದಕ್ಕೆ ಗೃಹಸ್ಥಾಶ್ರಮವೇ ದುರ್ಗವೆಂ ದು ಹೇಳುವರು. ಆದರ ಇದುವರೆಗೆ ವಿರಕ್ತನಾಗಿ, ತಾಪಸವೇಷ ದಿಂದಿದ್ದು, ಈಗ ಸ್ತ್ರೀಕಾಮುಕನಾಗಿ ಪ್ರವರ್ತಿಸುವುದು ದೋಷ ವಲ್ಲವೆ? ಎಂದರೆ, ಇದರಂತೆ ಹಿಂದೆ ಎಷ್ಟೋ ನಿದರ್ಶನಗಳುಂಟು! ಮಹಾತಪಸ್ವಿಯಾದ ವಿಶ್ವಾಮಿತ್ರನು, ಮೇನಕೆಯೆಂಬ ವೇಶ್ಯೆ ಯನ್ನು ಪರಿಗ್ರಹಿಸಲಿಲ್ಲವೆ! ಕಾಮಕ್ರೀಡೆಯಲ್ಲಿದ್ದ ಮತ್ಸ್ಯದಂ ಪತಿಗಳನ್ನು ನೋಡಿ ಸೌಭರಿಯು, ಕಾಮವಶನಾಗಿ ಕುಟುಂಬ ಧರ್ಮಕ್ಕೆ ಆಸೆಪಡಲಿಲ್ಲವೆ? ತಪೋನಿರತನಾಗಿದ್ದ ಚ್ಯವನನು, ಸು ಕನ್ಯೆಯನ್ನು ಪರಿಗ್ರಹಿಸಲಿಲ್ಲವೆ? ನಾನುಮಾತ್ರ ದೋಷಿಯಾಗು ವೆನೆ? ಇದಲ್ಲದೆ ಇಂತಹ ಭೋಗಾನುಭವದಿಂದಲೂ ಎಷ್ಟೋ ಗುಣವುಂಟು! ಮನುಷ್ಯನಿಗೆ, ತನ್ನ ಪಾಪಪುಣ್ಯಕರ್ಮಗಳೆಲ್ಲವನ್ನೂ ಅನುಭವಿಸಿ ಕಳೆದಹೊರತು ಮೋಕ್ಷವಿಲ್ಲವೆಂದು ಹೇಳುವರು. ಆದು ದರಿಂದಮೋಕ್ಷಾರ್ಥಿಗಳು ಪಾಪಕ್ಕೆ ಹೆದರುವಂತೆ,ಪುಣ್ಯಕ್ಕೂ ಹೆದ ರಲೇಬೇಕು! ಇದುವರೆಗೆ ಇಹಲೋಕಸುಖವನ್ನೇ ಕಾಣದೆ, ಗ್ರಾ ಮೈಕರಾತ್ರನಾಗಿ ಸಂಚರಿಸಿ, ಪಡಬಾರದ ಕಷ್ಟಗಳನ್ನು ಪಟ್ಟು, ಅದರಿಂದ ನನ್ನ ಪಾಪಶೇಷವೆಲ್ಲವೂ ಕಳೆದುಹೋಯಿತು. ಈಗ ಕುಟುಂಬಭೋಗದಿಂದ ಪುಣ್ಯಶೇಷವೂ ಕಳೆದುಹೋಗಲಿ! ಆ ಕನ್ಯೆಯನ್ನು ಕೈಸೇರಿಸಿಕೊಳ್ಳಬೇಕಾದುದೇ ಈಗಿನ ಅವಶ್ಯಕಾ ರ್ಯವು. ಅದಕ್ಕೇನುಪಾಯವನ್ನು ಮಾಡಲಿ! ನಾನಾಗಿಯೇ ಬಾಯಿಬಿಟ್ಟು ರಾಜನನ್ನು ಕೇಳಿಬಿಡಲೆ? ಛೀ! ಛೀ! ನಾಚಿಕೆ ಯಿಲ್ಲದೆ ಹೇಗೆ ಕೇಳಲಿ!

ಆ ರಾಜನು ಈ ನನ್ನ ಜಡೆಯನ್ನೂ, ಈ ಜಪಮಣಿಯನ್ನೂ ನೋಡಿ ನಾನು ಪರಮವಿರಕ್ತನೆಂದೂ, ಯಾವಾಗಲೂ ಹರಿಧ್ಯಾನಪರನೆಂದೂ ತಿಳಿದು, ನನ್ನಲ್ಲಿ ಎಷ್ಟೋ ಗೌರವವನ್ನು ತೋರಿಸುತ್ತಿರುವನು. ಈ ವೇಷದಿಂದ ನಾನು ಅವನಮುಂದೆ ನಿಂತು "ನಿನ್ನ ಮಗಳನ್ನು ನಾನು ಮೋಹಿಸಿದೆ" ನೆಂದರೆ, ಅವನು ನನ್ನನ್ನು ಎಷ್ಟು ತುಚ್ಛವಾಗಿ ಕಾಣುವನು? ಪರ್ವತನಾದರೂ ಈ ವಿಷಯವನ್ನು ಕೇಳಿದರೆ, ಅವನು ನನ್ನನ್ನು ಎಷ್ಟು ಹೇಳನಮಾಡುವನು? ನಾನು ಲೋಕವನ್ನು ವಂಚಿಸುವುದಕ್ಕಾಗಿಯೇ ಈ ವೇಷವನ್ನು ಧರಿಸಿದಂತಾಯಿತಲ್ಲಾ! ವಾಸ್ತವದಲ್ಲಿ ಈಗ ನನ್ನ ಸ್ಥಿತಿಯನ್ನು ನೋಡಿದರೆ,—

ಕಂ|| ಜಪಮಾಲೆ ಕಾಮಮಂತ್ರವ |
ಜಪಿಸಲ್ಕನೆಗಾಯ್ತು! ತಲೆಗೆ ಸುತ್ತಿದ ಜಡೆಯುಂ|
ನೃಪಕನ್ಯಾಮೋಹಜ್ವರ |
ವಿಪುಲಶಿರೋವ್ಯಥೆಗೆ ತಲೆಯ ಕಟ್ಟಾಯ್ತಕಟಾ! ||

ಇದಕ್ಕೇನು ಮಾಡಲಿ! (ಎಂದು ಸ್ವಲ್ಪಹೊತ್ತಿನವರೆಗೆ ಚಿಂತಿಸುತಿದ್ದು) ಇನ್ನು ಚಿಂತಿಸುವುದರಿಂದ ಪ್ರಯೋಜನವಿಲ್ಲ! ಈಗ ಈ ನನ್ನ ಚಪಲಬುದ್ಧಿಯನ್ನು ತಿರುಗಿಸುವುದೇನೋ ಸಾಧ್ಯವಲ್ಲ! ಪ್ರಯತ್ನಿಸಿದಹೊರತು ಕೆಲಸವಾಗುವುದಿಲ್ಲ! ನಾನಾಗಿಯೇ ಹೋಗಿ ರಾಜನಿಗೆ ನನ್ನ ಉದ್ದೇಶವನ್ನು ತಿಳಿಸಿಬಿಡುವೆನು! (ಆತುರದಿಂದ ಮುಂದೆ ಹೋಗಿ)ಛೀ! ಈ ತುಚ್ಛವಿಷಯವನ್ನು ಲಜ್ಜೆಯಿಲ್ಲದೆ ಹೇಗೆ ಕೇಳಲಿ! (ಹಿಂದೆ ಸರಿಯುವನು.) ತೆರೆಯಲ್ಲಿ ಹೆಜ್ಜೆಯ ಸದ್ದಾಗುವುದನ್ನು ಕೇಳಿ ಸಂಭ್ರಮದಿಂದ) ಓಹೋ ರಾಜನೇ ಇಲ್ಲಿಗೆ ಬರುವಂತಿದೆ! ಈಗೇನುಮಾಡಲಿ! ಮಾಡುವುದೇನು? ಏನಾದರೂ ಆಗಲಿ! "ಕಾಮಾತುರಾಣಾಂ ನ ಭಯಂ ಲಜ್ಜಾ!" ಈಗ ಲಜ್ಜೆಯನ್ನೂ, ಭಯವನ್ನೂ ಬಿಟ್ಟಹೊರತು, ಕಾರ್ಯಸಾಧನೆಯಾಗಲಾರದು! ಕೇಳಿಯೇ ಬಿಡುವೆನು.

(ರಾಜನು ಪ್ರವೇಶಿಸುವನು.)

ರಾಜಂ—ಪೂಜ್ಯರೆ! ವಂದಿಸುವೆನು. ವಸಿಷ್ಠಾಜ್ಞೆಯಂತೆ ಶ್ರೀಮತೀಕುಮಾರಿಯನ್ನು ದೇವತಾಸಾನ್ನಿಧ್ಯದಲ್ಲಿ ಬಿಟ್ಟುಬಂದೆನು. ಅಲ್ಲಿ ನಡೆಯಬೇಕಾದ ಅಭ್ಯುದಯಕಾರ್ಯಗಳೆಲ್ಲವೂ ನಡೆದುವು. ಇನ್ನು ತಾವು ಅರಮನೆಗೆ ಬಂದು ಆತಿಥ್ಯವನ್ನು ಸ್ವೀಕರಿಸಬಹುದಷ್ಟೆ!

ನಾರದಂ—(ಸ್ವಗತಂ) ರಾಜನಿಗೆ ನನ್ನ ಉದ್ದೇಶವನ್ನು ರಹಸ್ಯವಾಗಿ ತಿಳಿಸುವುದಕ್ಕೆ ತಕ್ಕ ಅವಕಾಶವು ಸಿಕ್ಕಿರುವುದು. ಕೇಳಿ ಬಿಡುವೆನು. (ಪ್ರಕಾಶಂ) ರಾಜೇಂದ್ರಾ!

ರಾಜಂ—ಪೂಜ್ಯರೆ! ಅನುಗ್ರಹಿಸಬೇಕು.

ನಾರದಂ—(ಸ್ವಗತಂ) ಅಯ್ಯೋ! ಲಜ್ಜೆಯು ಬಾಧಿಸುತ್ತಿರುವುದು. ಏನು ಮಾಡಲಿ! (ಎಂದು ಯೋಚಿಸುತ್ತ ಸುಮ್ಮನೆ ನಿಲ್ಲುವನು.)

ರಾಜಂ—ಮುನೀಂದ್ರಾ! ತಮ್ಮ ಮನಸ್ಸು ಏನೋ ಚಿಂತಾಕುಲವಾಗಿರುವ ಹಾಗಿದೆ! ದೇಹಕ್ಕೇನೂ ಆಯಾಸವಿಲ್ಲವಷ್ಟೆ?

ನಾರದಂ—(ಸ್ವಗತಂ) ಇನ್ನು ಸುಮ್ಮನಿರುವುದಕ್ಕಿಲ್ಲ! ಏನಾದರೂ ಉಪಾಯಾಂತರದಿಂದ ನನ್ನ ಉದ್ದೇಶವನ್ನು ತಿಳಿಸಿಬಿಡುವೆನು. (ಪ್ರಕಾಶಂ)ರಾಜಾ! ನನಗೆ ಬೇರೆ ಚಿಂತೆಯೇನಿರುವುದು? ನಿನ್ನ ಚಿಂತೆಯೇ ನನ್ನ ಚಿಂತೆ! ನಿನ್ನ ಸ್ಥಿತಿಗಾಗಿಯೇ ನನ್ನ ಮನಸ್ಸು ಪರಿತಪಿಸುತ್ತಿರುವುದು.

ರಾಜಂ—ಪೂಜ್ಯರೆ! ಅದೇನು? ನನಗಾಗಿ ತಾವು ಪರಿತಪಿಸಬೇಕಾದ ಕಾರಣವೇನು?

ನಾರದಂ—ಬೇರೇನಿದೆ? ನೀನು ನಿನ್ನ ಕುಮಾರಿಯ ವಿವಾಹಪ್ರಯತ್ನಕ್ಕಾಗಿ ಈಗ ವಹಿಸುತ್ತಿರುವ ಶ್ರಮವನ್ನು ನೋಡಿ, ನನಗೆ ಬಹಳ ಪರಿತಾಪವಾಗುವುದು. ಮೊದಲು ನಾನೇ ನಿನಗೆ ಧೈರ್ಯವನ್ನು ಹೇಳಿ ಸಮಾಧಾನಪಡಿಸಿದವನಾದರೂ, ಈಗೀಗ ನಿನ್ನ ಮಗಳ ವಿವಾಹವಿಷಯವಾದ ಚಿಂತೆಯು ನಿನಗಿಂತಲೂ ನನಗೆ ಹೆಚ್ಚೆಂದು ತಿಳಿ!

ರಾಜಂ—ಅದಕ್ಕೆ ತಡೆಯೇನು ? ಸಾಧುಗಳ ಸ್ವಭಾವವೇ ಇದು ! ಇತರರ ಸುಖದುಃಖಗಳಿಗೆ ಸಮಭಾಗಿಗಳಾಗುವುದೇ ಮಹಾತ್ಮರ ಲಕ್ಷಣ ವಲ್ಲವೆ ?

ನಾರದಂ—ನಾವಿಬ್ಬರೂ ಸುಮ್ಮನೆ ನಮ್ಮನಮ್ಮ ಮನಸ್ಸಿನಲ್ಲಿ ಕೊರಗುವು ದರಿಂದ ಫಲವಿಲ್ಲ ! ಕಾರ್ಯಸಾಧನೆಗೆ ತಕ್ಕ ಉಪಾಯವನ್ನು ನೋ ಡಬೇಕಲ್ಲವೆ ?

ರಾಜಂ—ಹೌದು ! ನಿಜವೆ! ಆದರೆ ನಮ್ಮ ಯತ್ನವೇನಿದೆ ?

ನಾರದಂ—ರಾಜಾ ! ಹಾಗಲ್ಲ ! ಇದುವರೆಗೆ ನಾನು ಏಕಾಕಿಯಾಗಿ ಇಲ್ಲಿ ಕುಳಿತು ಯೋಚಿಸಿದುದರಲ್ಲಿ, ನನ್ನ ಮನಸ್ಸಿಗೆ ಒಂದುಪಾಯವು ತೋರಿತು.

ರಾಜಂ—(ಸಂತೋಷದಿಂದ) ಪೂಜ್ಯರೆ ! ಅದೇನೆಂಬುದನ್ನು ಅನುಗ್ರಹಿಸಿದ ರೆ ಶಿರಸಾವಹಿಸಿ ನಡೆದುಕೊಳ್ಳುವೆನು.

ನಾರದಂ—ನಿನ್ನ ಮಗಳಿಗೇನೋ ಇದುವರೆಗೂ ತಕ್ಕ ವರನು ಲಭಿಸಲಿಲ್ಲ!

ರಾಜಂ—ಹೌದು!ಅದಕ್ಕಾಗಿಯೇ ನನ್ನ ಮನಸ್ಸು ಚಿಂತಿಸುತ್ತಿರುವುದು.

ನಾರದಂ—ನಿನ್ನ ಕುಮಾರಿಯ ರೂಪಲಾವಣ್ಯಾದಿಗಳನ್ನು ನೋಡಿದರೆ, ಮುಂದೆಯಾದರೂ ನಿಮ್ಮ ಕ್ಷತ್ರಿಯಕುಲದಲ್ಲಿ ಅವಳಿಗೆ ತಕ್ಕವರ ನು ಸಿಕ್ಕುವುದೇನೋ ದುರ್ಲಭವು ! ಅವಳ ವಿವಾಹವಿಷಯ ದಲ್ಲಿ ನಿನಗುಂಟಾಗಿರುವ ವ್ಯಾಕುಲತೆಯನ್ನು ಹೇಗಾದರೂ ತಪ್ಪಿ ಸಬೇಕೆಂದು ನನಗೆ ತೋರಿತು. ಆದುದರಿಂದ ಈಗ ನಾನು,ನನ್ನ ಸನ್ಯಾಸಧರ್ಮವನ್ನಾದರೂ ಪರಿತ್ಯಜಿಸಿ,ನಾನೇ ನಿನ್ನ ಮಗಳನ್ನು ವಿವಾಹಮಾಡಿಕೊಂಡು, ನನ್ನ ತಪೋಬಲದಿಂದ ಅವಳನ್ನು ರಾ ಜಮಹಿಷಿಯರಿಗಿಂತಲೂ ಉತ್ತಮವಾದ ಸ್ಥಿತಿಯಲ್ಲಿರಿಸಬೇಕೆಂಬ ಹಠವು ನನ್ನ ಮನಸ್ಸಿಗೆ ಹುಟ್ಟಿರುವುದು. ಇದಕ್ಕೆ ನಿನ್ನ ಅಭಿಪ್ರಾ ಯವೇನು ಹೇಳು!

ರಾಜಂ—(ನಗುತ್ತ) ಪೂಜ್ಯರೆ ! ತಮಗೆ ನನ್ನಲ್ಲಿರತಕ್ಕ ಅಸಾಧಾರಣವಾ ತ್ಸಲ್ಯವು, ತಾವು ಮನಸ್ಸಿನಿಂದಲೂ ಸ್ಮರಿಸಬಾರದ

ವಿಷಯವನ್ನೂ ಬಾಯಿಂದಾಡಿಸುವಂತಿದೆ ! ಹೀಗೆ ಸ್ವಾರ್ಥತ್ಯಾಗಪೂರ್ವಕವಾಗಿಯಾದರೂ ಪರರಿಗೆ ಉಪಕಾರವನ್ನು ಮಾಡಬೇಕೆಂದು ಬಯಸುವುದು ತಮ್ಮಂತಹ ಮಹಾತ್ಮರಿಗೆ ಸಹಜಗುಣವಾಗಿದೆ! ತಮ್ಮ ಈ ಉಪಚಾರೋಕ್ತಿಗಳೇ ನನ್ನ ಮನಸ್ಸಿಗೆ ಎಷ್ಟೋ ಆಪ್ಯಾಯನವನ್ನುಂಟುಮಾಡಿರುವುವು.

ನಾರದಂ—ರಾಜೇಂದ್ರಾ ! ನಾನು ಕೇವಲ ಉಪಚಾರೋಕ್ತಿಗಾಗಿ ಈ ಮಾತನ್ನು ಹೇಳಿದೆನೆಂದೆಣಿಸಬೇಡ ! ವಾಸ್ತವವಾಗಿಯೇ ಹೇಳುತ್ತಿರುವೆನು.

ರಾಜಂ—ಪೂಜ್ಯರೆ ! ನಾನು ನನ್ನ ಮಗಳ ವಿವಾಹವಿಷಯವಾಗಿ ಆತುರಪಡುತ್ತಿರುವುದನ್ನು ನೋಡಿ, ನನ್ನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಹಂಗಿಸುವಂತಿದೆ ! ಪರಮವಿರಕ್ತಶಿಖಾಮಣಿಗಳಾದ ತಮ್ಮಂತವರು, ಈ ಸಂಸಾರಮಾರ್ಗವನ್ನು ಎಷ್ಟುಹೇಯವಾಗಿ ಎಣಿಸಿರುವಿರೆಂಬುದನ್ನು ನಾನು ಕಾಣೆನೆ? ಈವಿಚಾರವು ಸಾಕು! ಆತಿಥ್ಯಕ್ಕಾಗಿ ದಯೆಮಾಡಿಸಬೇಕು !

ನಾರದಂ—(ಸ್ವಗತಂ) ಇವನಿಗೆ ಇನ್ನೂ ನನ್ನ ಮಾತಿನಲ್ಲಿ ನಂಬಿಕೆಯಿಲ್ಲ ! ಯಾವವಿಧದಿಂದ ನಂಬಿಕೆಯನ್ನು ಹುಟ್ಟಿಸಲಿ! ಇರಲಿ! ಬೇರೊಂದುಪಾಯವನ್ನುಮಾಡುವೆನು. (ಪ್ರಕಾಶಂ) ರಾಜಾ ! ನಾನು ನನ್ನ ಮನಃಪೂರ್ವಕವಾದ ಅಭಿಪ್ರಾಯವನ್ನು ತಿಳಿಸಿದರೂ, ನೀನು ಬೇರೆಬೇರೆ ನೆವದಿಂದ ಅದಕ್ಕೆ ವಿರುದ್ಧವಾಗಿ ಹೇಳುವುದನ್ನು ನೋಡಿದರೆ, ಈ ತಾಪಸವೇಷದಲ್ಲಿರುವ ನನಗೆ ನಿನ್ನಮಗಳನ್ನು ವಿವಾಹಮಾಡಿಕೊಡುವುದಕ್ಕೆ ಇಷ್ಟವಿಲ್ಲದಂತೆ ತೋರುವುದು.ನಿಜವಾಗಿಯೂ ನಿನ್ನ ಮಗಳಲ್ಲಿ ನನಗೆ ಹುಟ್ಟಿದ ಮೋಹ— (ಎಂದು ಅರ್ಧೋಕ್ತಿಯಲ್ಲಿ ನಿಲ್ಲಿಸಿ) ಅನುಗ್ರಹಬುದ್ಧಿಯಿಂದಲೇ ನಾನು ಹೇಳಿದೆನು. ಇದರಮೇಲೆ ನಿನ್ನ ಇಷ್ಟದಂತೆ ನಡೆಸು. (ಎಂದು ಕೋಪದಿಂದ ಹಿಂತಿರುಗುವನು.)

**ರಾಜಂ**—(ಭಯಾಶ್ಚರ್ಯಗಳೊಡನೆ) (ಸ್ವಗತಂ) ಓಹೋ! ಇದೇನು! ಇವರು ಹೀಗೆ ಉಪಕ್ರಮಿಸಿದರು? ಇದುವರೆಗೆ ಇವರು ಹೇಳಿದುದೆಲ್ಲವೂ ಕೇವಲವಿನೋದಾರ್ಥವೆಂದು ತಿಳಿದಿದ್ದೆನು. ನಿಜವಾಗಿಯೇ ಅವರಿಗೆ ವಿವಾಹಾಭಿಲಾಷೆಯು ಹುಟ್ಟಿದಂತಿದೆ. ಒಂದುವೇಳೆ ನನ್ನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ಹೇಳಿರಬಹುದೆ? ಹೇಗಿದ್ದರೂ ಇರಲಿ! ಇವರ ಕೋಪಕ್ಕೆ ಪಾತ್ರನಾಗಬಾರದು. (ಪ್ರಕಾಶಂ) ಮುನೀಂದ್ರಾ! ಕ್ಷಮಿಸಬೇಕು! ಬೇರೆವಿಧವಾಗಿ ಭಾವಿಸಕೂಡದು! ನಿಜವಾಗಿಯೂ ತಾವು ನನ್ನ ಕನ್ಯೆಯನ್ನು ಬಯಸುವಪಕ್ಷದಲ್ಲಿ, ಅದು ನನ್ನ ಭಾಗ್ಯೋದಯವಲ್ಲವೆ? ಕನ್ಯಾದಾನಕ್ಕೆ ತಮಗಿಂತಲೂ ಸತ್ಪಾತ್ರವೆಲ್ಲಿ ದೊರೆಯುವುದು! ಅವಶ್ಯವಾಗಿ ಪರಿಗ್ರಹಿಸಬಹುದು! ನಾಳೆಯೇ ಅಗ್ನಿಸಾಕ್ಷಿಕವಾಗಿ ಧಾರೆಯೆರೆದು ಕೊಡುವೆನು.

**ನಾರದಂ**—(ಸಂತೋಷದಿಂದ ರಾಜನ ಕೈಯನ್ನು ಹಿಡಿದು) ರಾಜೇಂದ್ರಾ! ಇಷ್ಟೇ ನನ್ನ ಉದ್ದೇಶವು! ಆದರೆ "ಶ್ರೇಯಾಂಸಿ ಬಹುವಿಘ್ನಾನಿ" ಎಂಬಂತೆ, ಅನುಕೂಲಕಾರ್ಯಗಳಿಗೆ ಅನೇಕವಿಘ್ನಗಳುಂಟಾಗುವುದು ಸಹಜವು. ಆದುದರಿಂದ ಕಾರ್ಯನಿರ್ವಾಹವಾಗುವವರೆಗೆ ಈ ರಹಸ್ಯವನ್ನು ಹೊರಗೆ ಬಿಡದೆ ಶುಭಕಾರ್ಯವನ್ನು ಶೀಘ್ರದಲ್ಲಿ ನಡೆಸಿಬಿಡಬೇಕು.

**ರಾಜಂ**—ತಮ್ಮ ಇಷ್ಟದಂತೆಯೇ ಆಗಲಿ! ನಾಳೆಯೇ ನಡೆಸಿಬಿಡುವೆವು. ಆದರೆ ಕನ್ಯೆಯರ ವಿವಾಹವಿಷಯದಲ್ಲಿ, ತಾಯಿಯ ಅನುಮತಿಯು ಬಹಳ ಮುಖ್ಯವಾದುದರಿಂದ, ನನ್ನ ಪತ್ನಿಯಲ್ಲಿ ಈವಿಷಯವನ್ನು ತಿಳಿಸಿ, ಹೇಗಾದರೂ ಅವಳನ್ನೊಪ್ಪಿಸಿ, ವಿವಾಹಲಗ್ನವನ್ನು ನಿರ್ಣಯಿಸುವೆನು.

**ನಾರದಂ**—ರಾಜೇಂದ್ರಾ! ನಿನ್ನ ಪತ್ನಿಯು ಎಂದಿಗೂ ಈಕಾರ್ಯಕ್ಕೆ ಸಮ್ಮತಿಸದಿರಲಾರಳು! ಮುಖ್ಯವಾಗಿ "ಮಾತಾ ವಿತ್ತಂ" ಎಂಬಂತೆ ಹೆಣ್ಣುಮಕ್ಕಳು ಭಾಗ್ಯವಂತರಾಗಿ ಬಾಳುತ್ತಿರಬೇಕೆಂಬುದೇ ತಾ

ಯಿಯ ಕೋರಿಕೆ! ಅದಕ್ಕೆ ಲೋಪವಿಲ್ಲದೆ ನೋಡಿಕೊಳ್ಳುವ ಭಾರವು ನನಗಿರಲಿ! ನನ್ನ ಯೋಗಬಲದಿಂದಲೇ ನಿನ್ನ ಮಗಳಿಗೆ ಸಮಸ್ತಸೌಭಾಗ್ಯಗಳನ್ನೂ ಕೈಗೂಡಿಸುವೆನು. ಬೇಕಾದರೆ ನಾನೇ ಹೋಗಿ ನಿನ್ನ ಪತ್ನಿಗೆ ಈವಿಷಯದಲ್ಲಿ ನಂಬಿಕೆಯನ್ನು ಹುಟ್ಟಿಸಿ ಬರುವೆನು. ಇನ್ನೇನೂ ಸಂದೇಹವಿಲ್ಲವಷ್ಟೆ ?

ರಾಜಂ—ಸಂದೇಹವೇನಿದೆ? ಇನ್ನು ತಾವು ದಯೆಮಾಡಿಸಿ, ಆತಿಥ್ಯವನ್ನು ಸ್ವೀಕರಿಸಬಹುದಷ್ಟೆ?

ನಾರದಂ—ರಾಜೇಂದ್ರಾ! ಸೂರ್ಯನು ಗಗನಮಧ್ಯವರ್ತಿಯಾಗಿರುವನು. ನಾನು ಪರ್ವತನನ್ನೂ ಕರೆದುಕೊಂಡು, ನದಿಗೆ ಹೋಗಿ ಮಾಧ್ಯಾಹ್ನಿಕವನ್ನು ತೀರಿಸಿಕೊಂಡು ಬರುವೆನು! ನೀನು ಹೊರಡು! (ರಾಜನೂ, ನಾರದನೂ ಬೇರೆಬೇರೆ ಕಡೆಗೆ ಹೊರಡುವರು. ನಾರದನು ಪುನಃ ಪ್ರವೇಶಿಸಿ) ನಾನು ಪರ್ವತನಿಗಾಗಿ ನಿರೀಕ್ಷಿಸುವುದು ಸರಿಯಲ್ಲ! ಈಗ ನಾನು ಅವನೊಡನೆ ಸೇರಿದರೆ, ನನ್ನ ಮನೋಭಾವವು ಹೇಗಾದರೂ ಅವನಿಗೆ ತಿಳಿದುಹೋಗುವುದು. ಅವನು ನಿಜವಾಗಿಯೂ ನನಗೆ ಹಿತೈಷಿಯಾದುದರಿಂದ, ಈ ನನ್ನ ಬುದ್ಧಿಮೋಹವನ್ನು ತಪ್ಪಿಸುವುದಕ್ಕಾಗಿ ಯತ್ನಿಸುವನು. ನನ್ನ ಮುಂದೆಯೇ ನನ್ನನ್ನು ಹಾಸ್ಯಮಾಡುವುದಲ್ಲದೆ, ರಾಜನಿಗೂ ರಹಸ್ಯವಾಗಿ ಬೋಧಿಸಿ, ಈ ಕಾರ್ಯಕ್ಕೆ ವಿಘಾತವನ್ನುಂಟುಮಾಡಬಹುದು. ಕಾರ್ಯಸಾಧನೆಯಾಗುವವರೆಗೆ ಅವನ ಕಣ್ಣಿಗೆ ಬೀಳದೆ, ಬೇರೆಲ್ಲಿಗಾದರೂ ಹೊರಟುಹೋಗುವುದೇ ಮೇಲು! ಆದುದರಿಂದ ಅವನು ಇಲ್ಲಿಗೆ ಹಿಂತಿರುಗಿಬರುವಷ್ಟರಲ್ಲಿ, ಬೇರೆ ದಾರಿಯಿಂದ ಕಣ್ಮರೆಯಾಗಿ ಹೊರಟುಹೋಗುವೆನು (ಹೋಗುವನು.)

(ಇತ್ತಲಿಂದ ಪರ್ವತನು ಪ್ರವೇಶಿಸುವನು.)

ಪರ್ವತಂ—(ಉದ್ಯಾನವನ್ನು ಸುತ್ತಿ ನೋಡಿ) ಓಹೋ! ಇದೇನು ? ಆಗಲೇ ಎಲ್ಲರೂ ಹೊರಟುಹೋಗಿರುವರು! ನಾರದನೂ ಅವರ ಜತೆಯಲ್ಲಿಯೇ ಅರಮನೆಗೆ ಹೋಗಿರಬಹುದು! ಇರಲಿ! ನಾನೂ

ಅದನ್ನೇ ಬಯಸುತಿದ್ದೆನು. ಈಗ ನಾನು ಬೇರೊಬ್ಬರ ಕಣ್ಣಿಗೆ ಮರೆಯಾಗಿರುವುದೇ ಮೇಲೆಂದು ತೋರುವುದು. ಇಲ್ಲ ದಿದ್ದರೆ ನನ್ನಸ್ಥಿತಿಯು ಕೇವಲಹಾಸ್ಯಾಸ್ಪದವಾಗುವುದು. ಅದರ ಲ್ಲಿಯೂ ನಾರದನಿಗೆ ನನ್ನ ಸ್ಥಿತಿಯು ತಿಳಿದರೆ,ನನ್ನನ್ನು ಸುಮ್ಮನೆ ಬಿಡುವನೆ ? ಆಹಾ! ಜಿತೇಂದ್ರಿಯನೆಂದರೆ ಆ ನಾರದನಿಗೇ ಸಲ್ಲು ವುದು. ಅವನೂ ೬ ಕನ್ಯಾರತ್ನವನ್ನು ಕಣ್ಣಿಂದ ನೋಡಿದವ ನಾದರೂ, ನನ್ನಂತೆ ಮೋಹಪಾಶಕ್ಕೆ ಸಿಕ್ಕಿಬಿಳದೆ ಧೈರ್ಯದಿಂದಿರು ದನ್ನು ನೋಡಿ ನನಗೇ ಆಶ್ಚರ್ಯವಾಗುವುದು! ಯಾವಯಾವ ವಿಧ ದಿಂದಲೂ ಈ ನನ್ನ ಚಪಲಬುದ್ಧಿಯನ್ನು ತಪ್ಪಿಸುವುದಕ್ಕೆ ನನಗೆ ಸಾಧ್ಯವಲ್ಲ! ಇದಕ್ಕೇನು ಮಾಡಲಿ! ಆಹಾ ! ಲೋಕದಲ್ಲಿ ಎಷ್ಟೋ ಕ್ರೂರವ್ಯಾಧಿಗಳನ್ನಾದರೂ ತಕ್ಕ ಚಿಕಿತ್ಸೆಗಳಿಂದ ಪರಿಹರಿಸ ಬಹುದು ! ಎಷ್ಟೋ ಕ್ರೂರಗ್ರಹಗಳನ್ನಾದರೂ, ಮಂತ್ರಬಲ ದಿಂದ ನೀಗಿಸಬಹುದು ! ಈ ಮನ್ಮಥಪಿಶಾಚವು ಹಿಡಿದಮೇಲೆ, ಅದನ್ನು ಬಿಡಿಸುವುದಕ್ಕೆ ಯಾವ ಉಪಾಯವೂ ಸಾಧ್ಯವೆಂದು ತೋರಲಿಲ್ಲ.

ಕಂ|| ಮಣಿಮಂತ್ರೌಷಧಮಂ ಕಡೆ
ಗಣಿಪುದು !'ಜಪಹೋಮದಾನದೇವಾರ್ಚನೆಯಂ ।
ಗಣನೆಗೆ ತಾರದು! ಸುಮಹೋ
ಲ್ಬಣಮೀ ಮನ್ಮಥಪಿಶಾಚಜನಿತಾವೇಶಂ ||

ನಿಜವಾಗಿಯೂ ಆ:ಮನ್ಮಥನ ಮಹಿಮೆಯೋ ಮಹಿಮೆ! ತ್ರೈಲೋ ಕ್ಯವಿಜಯಿಯೆಂದರೆ ಅವನೊಬ್ಬನಿಗೇ ಸಲ್ಲುವುದು! ಏಕೆಂದರೆ,

ಕಂ|| ಹರನಾತ್ಮಫಾಲನೇತ್ರದಿ
ನುರುಪಿದೊಡೇಂ ಸ್ಮರನ ದೇಹಮಂ ! ತದ್ವೀರ್ಯ ।
ಸ್ಫುರಣಮನಿನಿಸುಂ ನಂದಿಸ
ಲರಿದನೆ ? ದುರ್ದಮನೆ! ಮದನನಾರ್ಗ್ಗಂ ಧರೆಯೊಳ್ ||

ತ್ರಿಲೋಕಸಂಹಾರಿಯಾದ ರುದ್ರನಿಗೇ ಅಶಕ್ಯವಾಗಿರುವಾಗ, ಆ ಮನ್ಮಥನ ಪ್ರಾಬಲ್ಯವನ್ನು ಮುರಿಯಬೇಕೆಂದರೆ ನನ್ನಿಂ

ದ ಸಾಧ್ಯವೆ? ಎಂದಿಗೂ ಇಲ್ಲ! ಈ ನನ್ನ ಬುದ್ಧಿಮೋಹವನ್ನು ತಗ್ಗಿಸಬೇಕೆಂದರೆ, ಆ ಕನ್ಯೆಯನ್ನು ಕೈಸೇರಿಸಿಕೊಳ್ಳಬೇಕಾದುದೊಂದಲ್ಲದೆ ಬೇರೆ ಉಪಾಯವಿಲ್ಲ! ಇದಕ್ಕೇನು ಮಾಡಲಿ! ನನ್ನ ಮನೋಗತವನ್ನು ನಾನಾಗಿಯೇ ಹೋಗಿ ರಾಜನಿಗೆ ತಿಳಿಸಿಬಿಡಲೆ? ಹೇಗೆ ತಿಳಿಸಲಿ! ಲಜ್ಜೆಯು ಬಾಧಿಸುತ್ತಿರುವುದಲ್ಲಾ! ಇದಲ್ಲದೆ ನನ್ನ ಮಿತ್ರನಾದ ನಾರದನೂ ಈಗ ರಾಜನ ಸಂಗಡಲೇ ಇರುವನು. ಈ ವಿಚಾರವು ಅವನಿಗೆ ತಿಳಿದರೆ, ನನ್ನನ್ನು ಎಷ್ಟು ಹಾಸ್ಯಮಾಡುವನು! (ಆಲೋಚಿಸಿ) ಇರಲಿ! ಇದಕ್ಕೆ ಬೇರೊಂದುಪಾಯವನ್ನು ಮಾಡುವೆನು. ಈಗ ನಾನು ಸೆಟ್ಟಗೆ ರಾಜಪತ್ನಿಯಬಳಿಗೆ ಹೋಗಿ, ನಾರದನಿಗೆ ತಿಳಿಯದಂತೆ ಅವಳಿಗೆ ನನ್ನ ಮನೋಗತವನ್ನು ತಿಳಿಸುವೆನು. ನಯಭಯಗಳಿಂದ ಅವಳನ್ನೊಪ್ಪಿಸಿ, ಮೊದಲು ಅವಳಿಂದ ವಾಗ್ದಾನವನ್ನು ಮಾಡಿಸಿಕೊಂಡರೆ, ನನ್ನ ಉದ್ದೇಶವು ಕೈಗೂಡುವುದರಲ್ಲಿ ಸಂದೇಹವಿಲ್ಲ! ಅವಳು ಬಹಳ ಸಾಧುಸ್ವಭಾವವುಳ್ಳವಳಾದುದರಿಂದ, ಆಡಿದ ಮಾತಿಗೆ ತಪ್ಪಲಾರದೆ ರಾಜನನ್ನು ನಿರ್ಬಂಧಿಸುವಳು! ಆಮೇಲೆ ಈ ವಿಷಯವು ನಾರದನಿಗೆ ತಿಳಿದರೂ ಭಯವಿಲ್ಲ! ಈಗ ಇದೇ ಕಾಲೋಚಿತವಾದ ಉಪಾಯವು. ಇನ್ನು ಹೋಗುವೆನು.

(ಹೋಗುವನು)

ಆಸ್ಥಾನ:—ಅಂತಃಪುರ.

(ರಾಜಪತ್ನಿಯು ಸಖೀಸಮೇತಳಾಗಿ ಕುಳಿತಿರುವಳು)

ರಾಜಪತ್ನಿ—ಸಖಿ! ನಮ್ಮ ಶ್ರೀಮತೀಕುಮಾರಿಯಿಂದ ಇದುವರೆಗೆ ಎಷ್ಟೋವ್ರತೋಪವಾಸಗಳನ್ನು ನಡೆಸಿದುದಾಯಿತು: ಇನ್ನೂ ಅದಕ್ಕಾಗಿ ನಡೆಸಬೇಕಾದ ಅಭ್ಯುದಯಕಾರ್ಯಗಳೆಲ್ಲವನ್ನೂ ನಡೆಸಿದುದಾಯಿತು. ಇಷ್ಟಾದರೂ ಮನಸ್ಸಿಗೆ ನೆಮ್ಮದಿಯಿಲ್ಲದೆ, ಅದೇ ಚಿಂತೆಯು ನನ್ನನ್ನು ಬಾಧಿಸುತ್ತಿರುವುದು.

ಕೇತಾರಗೌಳ—ರೂಪಕತಾಳ.

ಅಂತರಂಗದ । ಚಿಂತೆಯೆನ್ನನು ॥ ಸಂತತ ಬಾಧಿಪ್ರು ॥ ದಂತ ॥
ಎಂತು ನೋಡಿದೊ। ಡೆನ್ನ ಮನವು । ಶಾಂತಿಯ । ನೊಂದದೆ । ಸಂತ। ಪಿಪುದು॥
ಇಂಪುವದೆನೆ ಯೆನ್ನ ನಂದನೆ । ಕುಂದಕುಸುಮ । ಸುಂದರರದನೆ ।
ಸುಂದರಾಂಗನ|ಕೈಯ ಪಿಡಿವ | ಚಂದದಿ | ನಡೆವುದ|ನೆಂದು ನಾ|ನೋಳ್ಪೆನೋ॥
ಅಂಗನಾಜನವೆಲ್ಲ ಕೂಡಿ । ತುಂಗವಿಭವದಿಂದ ಪಾಡಿ।
ಮಂಗಳಾಂಗಿಗೆ ಪರಿಣಯೋಚಿತ । ಮಂಗ । ಳಂಗಳ । ನೆಂದು | ಮಾಳ್ಪರೋ॥

ಸಖಿ—ದೇವಿ! ಸುಮ್ಮನೆ ಚಿಂತಿಸಿ ಫಲವೇನು? ಹೆಣ್ಣುಮಕ್ಕಳನ್ನು ಪಡೆದವರಿಗೆ ಹೇಗಿದ್ದರೂ ಈ ಚಿಂತೆಯು ತಪ್ಪಿದುದಲ್ಲ! ಲೋಕಯಾತ್ರೆಯೇ ಹೀಗೆ? ಕಾಲವು ಅನುಕೂಲಿಸಿಬಂದರೆ, ನಮ್ಮ ಪ್ರಯತ್ನವಿಲ್ಲದಂತೆಯೇ ಕಾರ್ಯವು ನಡೆದುಹೋಗುವುದು! ಅದುವರೆಗೆ ಮನಸ್ಸಮಾಧಾನದಿಂದ ನಿರೀಕ್ಷಿಸಬೇಕಾದುದೊಂದೇ ನಮ್ಮ ಕಾರ್ಯವು.

ರಾಣಿ—ಸಖಿ! ಇನ್ನು ಕಾಲನಿರೀಕ್ಷಣೆಯಿಂದತಾನೇ ಫಲವೇನು? ಎಲ್ಲಾ ದೇಶದ ರಾಜಕುಮಾರರ ಭಾವಚಿತ್ರಗಳನ್ನೂ ತರಿಸಿನೋಡಿದುದಾಯಿತಲ್ಲವೆ? ನಮ್ಮ ರಾಜಕುಲದಲ್ಲಿ ಇದುವರೆಗೆ ಸಿಕ್ಕದ ವರನು ಮುಂದೆಲ್ಲಿ ಸಿಕ್ಕುವನು?

ಸಖಿ—ದೈವಘಟನೆಯನ್ನು ಯಾರು ಬಲ್ಲರು? ರಾಜಕುಲದವನಿಲ್ಲದಿದ್ದರೆ ಅದಕ್ಕಿಂತಲೂ ಉತ್ತಮಕುಲದವನೇ ನಿನ್ನ ಮಗಳಿಗೆ ಪತಿಯಾಗಿ ಏರ್ಪಡಬಹುದು? ಅಥವಾ ಯಾವನಾದರೂ ದಿವ್ಯಪುರುಷನೊಬ್ಬನು ಬಂದು, ನಿನ್ನ ಮಗಳನ್ನು ವರಿಸಿದರೂ ವರಿಸಬಹುದು. ಇನ್ನು ನೀನು ಅದರ ಚಿಂತೆಯನ್ನು ಬಿಟ್ಟುಬಿಡು!

(ಪರ್ವತಮುನಿಯು ಪ್ರವೇಶಿಸುವನು.)

ರಾಣಿ—(ಸಂಭ್ರಮದಿಂದೆದ್ದು) ಪೂಜ್ಯರೆ! ವಂದಿಸುವೆನು.

ಪರ್ವತಂ—ದೇವಿ! ನಿನಗೆ ಶುಭವಾಗಲಿ!

ರಾಣಿ—ಈ ಪೀಠವನ್ನಲಂಕರಿಸಬೇಕು!

**ಪರ್ವತಂ**—ಅಮ್ಮಾ ! ನಾನು ವಸಂತೋದ್ಯಾನವನ್ನು ನೋಡಿ ಬರುವಷ್ಟರಲ್ಲಿ, ನೀವು ಅಲ್ಲಿಂದ ಹೊರಟುಬಂದಹಾಗಿದೆ! ನಾರದನೆಲ್ಲಿ?

**ರಾಣಿ**—ಪೂಜ್ಯರೆ! ವಸಿಷ್ಠಾಜ್ಞೆಯಾದುದರಿಂದ, ನಾವು ಮುಂದಾಗಿ ಹೊರಟುಬಂದೆವು. ಈಗ ನಾರದಮಹರ್ಷಿಯು ರಾಜಸಾನ್ನಿಧ್ಯದಲ್ಲಿರಬಹುದು.

**ಪರ್ವತಂ**—ಚಿಂತೆಯಿಲ್ಲ ! ಇರಲಿ ! ಈ ನಿನ್ನ ಸಖಿಯನ್ನು ಕಳುಹಿಸಿ, ನಾರದನೆಲ್ಲಿರುವನೆಂಬುದನ್ನು ತಿಳಿದುಬರುವಂತೆ ಹೇಳು !

**ರಾಣಿ**—ಸಖಿ ! ಬೇಗನೆ ಹೋಗಿ ಬಾ !

**ಸಖಿ**—ಅಪ್ಪಣೆ. (ಎಂದು ಹೋಗುವಳು )

**ಪರ್ವತಂ**—(ಅತ್ತಿತ್ತ ತೆರೆಯಕಡೆಗೆ ನೋಡಿ.) ದೇವಿ! ಈಗ ನಾನು ನಿನ್ನಲ್ಲಿಗೆ ಬಂದ ಉದ್ದೇಶವೇ ಬೇರೆ? ಆಕಾರ್ಯನಿರ್ವಾಹವಾಗುವವರೆಗೆ ಅದನ್ನು ಬಹಳ ರಹಸ್ಯವಾಗಿಟ್ಟಿರಬೇಕು.

**ರಾಣಿ**—ಪೂಜ್ಯರೆ ! ಆಜ್ಞೆಯಂತೆಯೇ ನಡೆಯುವೆನು. ಧಾರಾಳವಾಗಿ ತಿಳಿಸಬಹುದು.

**ಪರ್ವತಂ**—ಬೇರೇನೂ ಇಲ್ಲ ! ಆ ಉದ್ಯಾನವನದಲ್ಲಿ,ನಾನು ನಿನ್ನಮಗಳಾದ ಶ್ರೀಮತಿಯನ್ನು ನೋಡಿದುದುಮೊದಲು, ನನಗೆ ಅವಳೊಡನೆ ಗೃಹಸ್ಥಧರ್ಮದಲ್ಲಿರಬೇಕೆಂಬ ಆಸೆಯು ಹುಟ್ಟಿರುವುದು ಅವಳನ್ನು ನನಗೆ ವಿವಾಹಮಾಡಿಕೊಡುವುದಾದರೆ, ನಿನಗೂ ವರಾನ್ವೇಷಣದ ಕಷ್ಟವು ತಪ್ಪುವುದು. ನನ್ನ ಆಸೆಯೂ ತೀರುವುದು! ಈ ನನ್ನ ವೈದಿಕವೇಷವನ್ನು ನೋಡಿ ಸಂದೇಹಪಡಬೇಕಾದುದಿಲ್ಲ! ಅವಳಿಗೆ ಯಾವಸುಖದಲ್ಲಿಯೂ ಲೋಪವಿಲ್ಲದಂತೆ ನೋಡಿಕೊಳ್ಳುವ ಭಾರವು ನನಗಿರಲಿ ! ನನ್ನ ಯೋಗಬಲದಿಂದಲೇ ಅವಳಿಗೆ ಸಮಸ್ತ ಸಾಮ್ರಾಜ್ಯಭೋಗಗಳನ್ನೂ ಕೈಗೂಡಿಸಬಲ್ಲೆನು.

**ರಾಣಿ**—(ಆಶ್ಚರ್ಯದಿಂದ ಸ್ವಗತಂ)ಏನಿದು ! ಇಂತಹ ಪರಮವಿರಕ್ತರಿಗೂ ಕುಟುಂಬಧರ್ಮದಲ್ಲಿ ಆಸೆ ಹುಟ್ಟಿತೆ? ಒಂದುವೇಳೆ ಈ ಮಹರ್ಷಿಯು ನನ್ನಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಕೇಳಿರುವನೋ, ಇಲ್ಲವೇ

ನಿಜವಾಗಿಯೂ ಇವನಿಗೆ ವಿವಾಹಾಪೇಕ್ಷೆಯು ಹುಟ್ಟಿರುವುದೋ ತಿಳಿಯಲಿಲ್ಲ! ಈಗ ನಾನು ಯಾವ ಉತ್ತರವನ್ನು ಹೇಳಲಿ !

(ಎಂದು ಯೋಚಿಸುತ್ತ ನಿಲ್ಲುವಳು.)

ಪರ್ವತಂ—ಮಹಾರಾಜ್ಞೀ ! ಏನನ್ನು ಯೋಚಿಸುತ್ತಿರುವೆ ? ನಿನ್ನ ಅಭಿಪ್ರಾಯವೇನು ಹೇಳು ! ದೇವಾಂಗನೆಯರನ್ನೂ ಕಣ್ಣೆತ್ತಿ ನೋಡದ ನನಗೆ, ನಿನ್ನ ಮಗಳೊಡನೆ ಗೃಹಧರ್ಮವನ್ನು ನಡೆಸಬೇಕೆಂಬ ಆಸೆ ಹುಟ್ಟಿದುದು ನಿನ್ನ ಭಾಗ್ಯವೆಂದೇ ತಿಳಿ ! ಅಂತಹ ನಾನು ಕನ್ಯಾರ್ಥಿಯಾಗಿ ನಿನ್ನನ್ನು ಯಾಚಿಸುತ್ತಿರುವಾಗ, ನೀನು ಎಷ್ಟೋ ಸಂತೋಷಪಡಬೇಕಾದ ಸಂದರ್ಭದಲ್ಲಿ ಚಿಂತಿಸುತ್ತಿರುವೆಯಲ್ಲಾ !

ರಾಣಿ—(ಸ್ವಗತಂ) ಇವರ ಅಭಿಪ್ರಾಯವೇನೆಂದು ತಿಳಿಯುವುದಕ್ಕಿಲ್ಲ! ಹೇಗಾದರೂ ಆಗಲಿ ! ಅರ್ಥಿಗಳಾಗಿ ಬಂದ ಮಹರ್ಷಿಗಳನ್ನು ತಿರಸ್ಕರಿಸಿ ಅವರ ಕೋಪಕ್ಕೆ ಗುರಿಯಾಗಬಾರದು. (ಪ್ರಕಾಶಂ) ಮುನೀಂದ್ರಾ ! ಇದರಲ್ಲಿ ಚಿಂತಿಸಬೇಕಾದುದೇನಿದೆ? ಪರಮಭಾಗವತೋತ್ತಮರಾದ ನೀವು ನನ್ನ ಮಗಳನ್ನು ಬಯಸುವುದಾದರೆ, ಅದು ನಮ್ಮ ಭಾಗ್ಯವಿಶೇಷವೆಂಬುದರಲ್ಲಿ ಸಂದೇಹವೇನಿದೆ ? ಕನ್ಯಾದಾನಕ್ಕೆ ತಮಗಿಂತಲೂ ಸತ್ಪಾತ್ರವೆಲ್ಲಿ ದೊರೆಯುವುದು ? ಆದರೆ ತಾವು ಈ ವಿಚಾರವನ್ನು ಮಹಾರಾಜನಲ್ಲಿಯೇ ತಿಳಿಸಿದ್ದರೆ ಉತ್ತಮವಾಗಿತ್ತು ! ಸ್ತ್ರೀಯರು ಯಾವವಿಧದಲ್ಲಿಯೂ ಅಸ್ವತಂತ್ರರಲ್ಲವೆ ?

ಪರ್ವತಂ—ಮಹಾರಾಣೀ ! ಹಾಗಲ್ಲ ! ಕನ್ಯಾವಿವಾಹವಿಷಯದಲ್ಲಿ ಹೆತ್ತತಾಯಿಯ ಇಷ್ಟವೇ ಮುಖ್ಯವಾದುದು! ನೀನು ಇಷ್ಟಪಟ್ಟಪಕ್ಷದಲ್ಲಿ, ಮಹಾರಾಜನು ಅದಕ್ಕೆ ವಿರುದ್ಧವಾಗಿ ನಡೆಯಲಾರನು. ಬೇಕಾದರೆ ನಾನೇ ಮಹಾರಾಜನಲ್ಲಿ ತಿಳಿಸುವೆನು. ಮೊದಲು ಈಗ ನೀನು ವಾಗ್ದಾನವನ್ನು ಮಾಡು !

ರಾಣಿ —ಪೂಜ್ಯರೆ! ನನ್ನ ಅಡ್ಡಿಯೇನೂ ಇಲ್ಲ ! ನಾನು ಮನಃಪೂರ್ವಕವಾಗಿ ಸಮ್ಮತಿಸುವೆನು.

ಪರ್ವತಂ—ಇಷ್ಟೇ ನನ್ನ ಕೋರಿಕೆ. ನಿನ್ನಸಖಿಯೇಕೆ ಇನ್ನೂ ಬರಲಿಲ್ಲ! ಅದೋ ಬರುತ್ತಿರುವಳು.

(ಸಖಿಯು ಪ್ರವೇಶಿಸುವಳು.)

ಸಖಿ —ದೇವಿ ! ನಾರದಮಹರ್ಷಿಯು ಮಾಧ್ಯಾಹ್ನಿಕಕ್ಕಾಗಿ ನದಿಗೆ ಹೋಗಿರುವರಂತೆ?

ಪರ್ವತಂ—ಹಾಗಿದ್ದರೆ ನಾನೂ ನದಿಗೆ ಹೋಗಿಬರುವೆನು. (ಹೋಗುವನು.)

(ಮಹಾರಾಜ್ಞಿಯು ತನ್ನಲ್ಲಿ ತಾನು ಯೋಚಿಸುತ್ತಿರುವಳು.)

ಸಖಿ —ದೇವಿ! ಇದೇನು? ಏನೋ ಯೋಚಿಸುತ್ತಿರುವಹಾಗಿದೆ?ವಿಶೇಷವೇನೂ ಇಲ್ಲವಷ್ಟೆ ?

ರಾಣಿ —ಸಖಿ ! ದೈವಘಟನೆಯನ್ನು ಯಾರೂ ಕಂಡವರಿಲ್ಲವೆಂದು ಈಗ್ಗೆ ಸ್ವಲ್ಪಮೊದಲು ನೀನು ಹೇಳಿದ ಮಾತು, ಈಗಾಗಲೇ ನನ್ನ ನಿದರ್ಶನಕ್ಕೆ ಬಂದಿತು. ನಮ್ಮ ಕುಮಾರಿಯ ವಿವಾಹವು ಸಮೀಪಿಸಿದಂತೆ ತೋರುವುದು.

ಸಖಿ—(ಸಂಭ್ರಮದಿಂದ) ದೇವಿ ! ಅದು ಹೇಗೆ? ವರನು ಯಾರು ?

ರಾಣಿ —ಸಖಿ!ಈ ವಿಚಾರವನ್ನು ನಾನು ಬಹಳ ರಹಸ್ಯವಾಗಿಡಬೇಕಾದರೂ ನೀನು ನನಗೆ ಆಪ್ತಸಖಿಯಾದುದರಿಂದ,ನಿನ್ನಲ್ಲಿ ಬಚ್ಚಿಡಲಾರೆನು. ಈಗ ಬಂದಿದ್ದ ಪರ್ವತಮಹರ್ಷಿಯೇ ಕನ್ಯಾರ್ಥಿಯಾಗಿ ಬಂದು ನನ್ನಲ್ಲಿ ಯಾಚಿಸಿದನು.

ಸಖಿ—(ನಗುತ್ತ)ದೇವಿ! ಇದುವರೆಗೆ ರಾಜಕುಲದಲ್ಲಿಯೇ ಅನುರೂಪನಾದ ವರನಿಲ್ಲವೆಂದು ಎಲ್ಲರನ್ನೂ ನಿರಾಕರಿಸುತಿದ್ದ ನೀನು, ಕೊನೆಗೆ ಈ ಶ್ರೋತ್ರಿಯನಿಗೆ ನಿನ್ನ ಮಗಳಗ್ನು ಕೊಟ್ಟು ಮದುವೆಮಾಡಬೇಕಾಯಿತೆ ?

ರಾಣಿ—ಸಖಿ! ಆ ಚಿಂತೆಯು ನನಗೆ ಎಳ್ಳಷ್ಟಾದರೂ ಇಲ್ಲ! ಆದರೆ ಆಮಹರ್ಷಿಯು ತಾನಾಗಿ ನನ್ನಮಗಳನ್ನು ಮೋಹಿಸಿದಹಾಗೆ ಹೇಳುವನು ನಿಜವಾಗಿ ಮೋಹಿಸಿರುವನೋ, ಅಥವಾ ನನ್ನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಕೇಳಿರುವನೋ ತಿಳಿಯಲಿಲ್ಲ! ನಿಜವನ್ನು ತಿಳಿಯದೆ ನನ್ನಮನಸ್ಸು ಕಳವಳಿಸುತ್ತಿರುವುದು.

ಸಖಿ—ದೇವಿ! ನಿನ್ನನ್ನು ಪರೀಕ್ಷಿಸಿ ಆಮಹರ್ಷಿಗಾಗಬೇಕಾದುದೇನು? ನಿಜವಾಗಿಯೇ ಅವನು ನಿನ್ನ ಮಗಳನ್ನು ಮೋಹಿಸಿರಬಹುದು. ನಿನ್ನ ಮಗಳ ರೂಪಲಾವಣ್ಯಗಳು ಯಾರನ್ನುತಾನೇ ಮೋಹಗೊಳಿಸುವುದಿಲ್ಲ!

ರಾಣಿ—ಸಖಿ! ಹಾಗಲ್ಲ! ವಿಶ್ವಾಮಿತ್ರಮಹರ್ಷಿಯು ಹಣದಾಸೆಯಿಂದ ಹರಿಶ್ಚಂದ್ರನಲ್ಲಿ ದಕ್ಷಿಣೆಯನ್ನು ಬೇಡಿದನೆ? ಅದರಂತೆಯೇ ಈಗಲೂ ಈ ಪರ್ವತಮುನಿಯು, ಯಾವ ಉದ್ದೇಶದಿಂದ ಕೇಳಿರುವನೋ ಯಾರು ಬಲ್ಲರು! ಅವನಂತೂ ನನ್ನನ್ನು ನಿರ್ಬಂಧಿಸಿ, ನನ್ನಿಂದ ವಾಗ್ದಾನವನ್ನು ಮಾಡಿಸಿಕೊಂಡಿರುವನು. ಸಖಿ! ಆದುದಾಯಿತು! ಮೊದಲು ನಾನು ಈ ವಿಚಾರವನ್ನು ಆರ್ಯಪುತ್ರನಲ್ಲಿ ತಿಳಿಸಿದಹೊರತು ಮನಸ್ಸಿಗೆ ಸಮಾಧಾನವಿಲ್ಲ! ನೀನು ಹೋಗಿ ಅಲ್ಲಿನ ಸಮಯವನ್ನು ತಿಳಿದು ಬಾ! (ಸಖಿಯು ಹೋಗಿ ಆತುರದಿಂದ ಹಿಂತಿರುಗಿ ಬಂದು) ದೇವಿ! ಇದೋ! ಮಹಾರಾಜನೇ ನಿನ್ನಲ್ಲಿಗೆ ಬರುತ್ತಿರುವನು.

(ಮಹಾರಾಜನು ಪ್ರವೇಶಿಸುವನು. ರಾಣಿಯು ಸಂಭ್ರಮದಿಂದೆದ್ದುಬಂದು)

ರಾಣಿ—ನಾಥಾ! ಅತ್ಯವಶ್ಯವಾದ ಒಂದು ವಿಷಯವನ್ನು ಕುರಿತು ಮಾತಾಡುವುದಕ್ಕಾಗಿ, ಈಗಲೇ ನಾನು ನಿನ್ನ ಸಮಯವನ್ನು ತಿಳಿದು ಬರುವಂತೆ ಈ ನನ್ನ ಸಖಿಯನ್ನು ಕಳುಹಿಸಿದೆನು. ಇಷ್ಟರಲ್ಲಿ ನೀನಾಗಿ ಇಲ್ಲಿಗೆ ಬಂದುದು ಬಹಳ ಅನುಕೂಲವಾಯಿತು!

ರಾಜಂ—ನಿನ್ನ ಕಾರ್ಯಕ್ಕಿಂತಲೂ ಈಗ ನಾನು ಬಂದ ಕಾರ್ಯವು ಇನ್ನೂ ಅತ್ಯವಶ್ಯವಾದುದು! ಅದು ಹಾಗಿರಲಿ! ಮೊದಲು ನಿನ್ನ ಕಾರ್ಯವೇನೆಂಬುದನ್ನು ತಿಳಿಸಿಬಿಡು! ಆಮೇಲೆ ನನ್ನ ಸಂಗತಿಯನ್ನು ವಿವರವಾಗಿ ತಿಳಿಸುವೆನು. ಇದು ಬಹಳರಹಸ್ಯವಾದ ಸಂಗತಿ! (ಸಖಿಯನ್ನು ನೋಡಿ) ಮದನಿಕೆ! ಅತಿಥಿಗಳಾಗಿ ಬಂದ ನಾರದಪರ್ವತರಿಬ್ಬರೂ, ಮಾಧ್ಯಾಹ್ನಿಕಸ್ನಾನಾರ್ಥವಾಗಿ ನದಿಗೆ ಹೋಗಿರುವರು! ನೀನು ಹೋಮಶಾಲೆಯ ಬಾಗಿಲಲ್ಲಿ ನಿರೀಕ್ಷಿಸುತ್ತಿದ್ದು, ಅವರು ಬಂದೊಡನೆ ಇಲ್ಲಿ ಬಂದು ನನಗೆ ತಿಳಿಸು!

ಸಖಿ—ಅಪ್ಪಣೆ! (ಸಖಿಯು ಹೋಗುವಳು)

ರಾಣಿ—ನಾಥಾ! ಬೇರೇನೂ ಇಲ್ಲ! ದೈವಘಟನೆಯು ಬಹಳ ವಿಚಿತ್ರ ವಾಗಿದೆ! ನಮ್ಮ ಶ್ರೀಮತೀಕುಮಾರಿಯ ವಿವಾಹವಿಷಯದಲ್ಲಿ (ಎಂದು ಹೇಳುವಷ್ಟರಲ್ಲಿ ಅರ್ಧೋಕ್ತಿಯಲ್ಲಿ.)

ರಾಜಂ—ಸರಿ! ಸರಿ! ನಾನೂ ಅದನ್ನೇ ನಿನಗೆ ಹೇಳುವುದಕ್ಕಾಗಿ ಬಂದೆನು. ಈ ವಿಚಾರವು ನಿನಗೆ ಹೇಗೆ ತಿಳಿಯಿತು?

ರಾಣಿ—ಆ ಮಹರ್ಷಿಯೇ ಈಗ ನನ್ನಲ್ಲಿಗೆ ಬಂದಿದ್ದರು.

ರಾಜಂ—ಅವರು ನನ್ನೊಡನೆ ಮಾಧ್ಯಾಹ್ನಿಕಕ್ಕಾಗಿ ನದಿಗೆ ಹೋಗುವಂತೆ ಹೇಳಿ ಹೋದರು. ನಿನ್ನನ್ನು ಯಾವಾಗ ನೋಡಿರಬಹುದು?

ರಾಣಿ—ಇಲ್ಲಿಗೆ ಬಂದು ನನ್ನನ್ನು ನೋಡಿದಮೇಲೆ,ನದಿಗೆ ಹೋಗುವುದಾಗಿ ಹೇಳಿ ಹೋದರು.

ರಾಜಂ—ಇರಬಹುದು! ಆ ಮಹರ್ಷಿಯು ಈವಿಚಾರವಾಗಿ, ನಿನ್ನನ್ನು ಕಂಡು ಮಾತಾಡುವುದಾಗಿ ಹೇಳಿದ್ದರು. ಇಲ್ಲಿ ನಿನ್ನನ್ನು ನೋಡಿದಮೇಲೆ ಸ್ನಾನಾರ್ಥವಾಗಿ ಹೋಗಿರಬಹುದು. ಅದು ಹೋಗಲಿ! ಈಗ ನಿನ್ನ ಇಷ್ಟವೇನು ಹೇಳು! ಅದನ್ನು ತಿಳಿಯು ವುದಕ್ಕಾಗಿಯೇ ನಾನು ಇಲ್ಲಿಗೆ ಬಂದೆನು.

ರಾಣಿ—ನಾಥಾ! ಇದರಲ್ಲಿ ನನ್ನ ಇಷ್ಟವೇನಿದೆ? ಆ ಮಹರ್ಷಿಯು ಕೇಳಿದ ಮೇಲೆ ನಾವು ನಿರಾಕರಿಸುವುದಕ್ಕಾದೀತೆ? ಈ ವಿಚಾರದಲ್ಲಿ ನಾನು ಅಸ್ವತಂತ್ರಳಾದರೂ, ನನ್ನ ಸಮ್ಮತಿಯನ್ನು ನಾನು ತಿಳಿಸಿ ಬಿಟ್ಟೆನು.ಇದರಮೇಲೆ ನಿನ್ನ ಇಷ್ಟಾನುಸಾರವಾಗಿ ನಡೆಸಬಹುದು.

ರಾಜಂ—ದೇವಿ! ನನ್ನ ಇಷ್ಟಕ್ಕೆ ನೀನು ವಿರುದ್ಧವಾಗಿ ನಡೆಯಲಾರೆಯೆಂಬ ಭರವಸದಿಂದ ನಾನೂ ಹಾಗೆಯೇ ಆ ಮಹರ್ಷಿಗೆ ವಾಗ್ದಾನ ವನ್ನು ಮಾಡಿರುವೆನು. ನಿನಗೆ ಈ ವಿಚಾರವು ಸಮ್ಮತವೋ, ಇಲ್ಲವೋ ಎಂದು ನಾನು ಬಹಳ ಭಯಪಡುತಿದ್ದೆನು. ದೈವಾ ಧೀನದಿಂದ ನಮ್ಮಿಬ್ಬರ ಅಭಿಪ್ರಾಯವೂ ಏಕೀಭವಿಸಿತು! ಅನು ಕೂಲದಾಂಪತ್ಯದ ಲಕ್ಷಣವೇ ಇದು! ನನಗೆ ನೀನು ಅರ್ಧಾಂಗಿ

ಯೆಂಬುದು ಇದರಿಂದಲೇ ಸ್ಪಷ್ಟವಾಗುವ್ರದು. ದೇವಿ! ಇನ್ನು ಕಾಲವಿಳಂಬವು ಸಾಕು! ವಿವಾಹಕ್ಕೆ ಬೇಕಾದ ಸನ್ನಾಹಗಳೆಲ್ಲ ವನ್ನೂ ಸಿದ್ಧಪಡಿಸುವೆವು.

ರಾಣಿ—ನಾಥಾ! ಹೌದು! ಶುಭಕಾರ್ಯವನ್ನು ಶೀಘ್ರದಲ್ಲಿಯೇ ನಡೆಸಿ ಬಿಡಬೇಕು.

ರಾಜಂ—ಯಾರಲ್ಲಿ!

ಕಂಚುಕಿಯು—(ಪ್ರವೇಶಿಸಿ) ಮಹಾರಾಜನೆ! ಏನಪ್ಪಣೆ!

ರಾಜಂ—ಜಯಂಧರಾ! ಈಗಲೇ ನೀನು ಹೋಗಿ, ವಿವಾಹಕ್ಕೆ ಬೇಕಾದ ಸಕಲಸನ್ನಾಹಗಳನ್ನೂ ಸಿದ್ಧಪಡಿಸುವಂತೆ ನಮ್ಮ ಗೃಹಾಧ್ಯಕ್ಷನಿಗೆ ತಿಳಿಸು! ನಮ್ಮ ಶ್ರೀಮತೀಕುಮಾರಿಯನ್ನು ದೇವರ್ಷಿಯಾದ ನಾರದನಿಗೆ ಕೊಟ್ಟು—

ರಾಣಿ—(ನಗುತ್ತ) ನಾಥಾ! ಇದೇನು? ಈ ಸಂತೋಷಸಂಭ್ರಮದಲ್ಲಿ ವರನ ಹೆಸರನ್ನೇ ಮಾರಿಸಿಬಿಟ್ಟೆಯಲ್ಲಾ! ಪರ್ವತಮಹರ್ಷಿಯೆಂದು ಹೇಳು!

ರಾಜಂ—ಪ್ರಿಯೆ! ಚೆನ್ನಾಯಿತು! ಆ ಮಹರ್ಷಿಗಳ ಹೆಸರಿನಲ್ಲಿ ನಿನಗೇ ಭ್ರಾಂತಿಯುಂಟಾಗಿರುವಹಾಗಿದೆ. ನಮ್ಮಲ್ಲಿ ಕನ್ಯಾರ್ಥಿಯಾಗಿ ಬಂದಿದ್ದವನು ನಾರದನು!

ರಾಣಿ—ನಾಥಾ! ಇಲ್ಲ! ನಾರದನನ್ನು ನಾನು ಕಾಣೆನೆ? ನನ್ನಲ್ಲಿಗೆ ಬಂದಿದ್ದವನು ಪರ್ವತಮುನಿ.

ರಾಜಂ—(ಬೆಚ್ಚರಬಿದ್ದು) ಏನು? ನಿಜವಾಗಿಯೂ ನಿನ್ನಲ್ಲಿ ಬಂದಿದ್ದವನು ಪರ್ವತನೆ?

ರಾಣಿ—ನಾಥಾ! ನಿಜವಲ್ಲದೆ ನಿನ್ನೊಡನೆ ನಾನು ಸುಳ್ಳಾಡುವೆನೆ? ನಿಜವಾಗಿಯೂ ನನ್ನಲ್ಲಿ ಬಂದು ಕೇಳಿದವನು ಪರ್ವತನು.

ರಾಜಂ—ಪರ್ವತನಿಗೇ ನೀನು ನಿನ್ನ ಮಗಳನ್ನು ಕೊಡುವುದಾಗಿ ವಾಗ್ದಾನ ಮಾಡಿದುದು?

ರಾಣಿ—ಹೌದು ! ಪರ್ವತನಿಗೇ ನಾನು ಮಾತುಕೊಟ್ಟಿದ್ದು.

ರಾಜಂ—(ಚಿಂತೆಯಿಂದ ನಿಟ್ಟುಸಿರನ್ನು ಬಿಟ್ಟು) ಪ್ರಿಯೆ! ನಾವು ಮೋಸ ಹೋದೆವು! ನಾರದಮುನಿಯು ನನ್ನಲ್ಲಿ ಬಂದು ಕೇಳಿದುದರಿಂದ ಅವನಿಗೆ ನಾನು ವಾಗ್ದಾನವನ್ನು ಮಾಡಿಬಿಟ್ಟೆನು. ದೇವಿ! ಕೇವಲ ವಿರಕ್ತನಾದ ಆ ನಾರದನು ನನ್ನೊಡನೆ ವಿವಾಹಪ್ರಸ್ತಾವವನ್ನು ಎತ್ತಿದಾಗಲೇ ನನಗೆ ಸಂದೇಹವು ಹುಟ್ಟಿತು. ಈಗ ಆ ಸಂದೇಹವು ಸ್ಥಿರಪಟ್ಟಿತು ! ಆ ಮಹರ್ಷಿಗಳಿಬ್ಬರೂ ತಮ್ಮೊಳಗೆ ತಾವು ರಹಸ್ಯದಲ್ಲಿ ಮಾತಾಡಿಕೊಂಡು, ನಮ್ಮನ್ನು ಪರೀಕ್ಷಿಸುವುದಕ್ಕಾಗಿಯೇ ಹೀಗೆ ಮಾಡಿರುವರು ! ಈಗ ನಮ್ಮಿಬ್ಬರಲ್ಲಿ ಯಾರ ಮಾತು ಸುಳ್ಳಾಗಬೇಕು? ಪ್ರಿಯೆ ! ಮುಖ್ಯವಾಗಿ ನಾವು ಧರ್ಮಸಂಕಟದಲ್ಲಿ ಸಿಕ್ಕಿಬಿದ್ದೆವು. ಮಾಡುವುದೇನು ?

ರಾಣಿ —ನಾಥಾ ! ಮೊದಲು ಆ ಪರ್ವತಮುನಿಯು ಬಂದು ನನ್ನನ್ನು ಕೇಳಿದಾಗ, ನನಗೂ ಆ ಸಂದೇಹವೇ ಹುಟ್ಟಿತು. ಹಾಗಿದ್ದರೂ ಆ ಮಹರ್ಷಿಯು ಹೇಳಿದ ಮಾತುಗಳು ನಿರ್ವಂಚನೆಯಾಗಿ ತೋರಿದುದರಿಂದ, ನಾನು ಸಮ್ಮತಿಸಬೇಕಾಯಿತು. ನಮ್ಮಿಬ್ಬರನ್ನೂ ಧರ್ಮಸಂಕಟದಲ್ಲಿ ಸಿಕ್ಕಿಸಿ ವಂಚಿಸುವುದಕ್ಕಾಗಿಯೇ ನಾರದನು ಈ ಸಂವಿಧಾನವನ್ನು ಮಾಡಿರಬಹುದೆಂದು ಈಗ ಚೆನ್ನಾಗಿ ಸ್ಪಷ್ಟವಾಗುವುದು.

ರಾಜಂ— (ಆಲೋಚಿಸಿ) ದೇವಿ ! ಹಾಗೆ ನಿರ್ಧರಿಸುವುದಕ್ಕೂ ಸಾಧ್ಯವಿಲ್ಲ! ಸಾಧುವತ್ಸಲನಾದ ನಾರದನು ನನ್ನನ್ನು ವಂಚಿಸುವನೆಂದು ನನಗೆ ತೋರಲಿಲ್ಲ ! ನಮ್ಮನ್ನು ವಂಚಿಸಿ ಅವನಿಗಾಗಬೇಕಾದುದೇನು ? ಕಾಲವಶದಿಂದ ಎಂತಹ ಜಿತೇಂದ್ರಿಯರಿಗಾದರೂ ಬುದ್ಧಿಯು ಕದಲುವುದುಂಟು ? ಅದರಂತೆ ಆ ತಾಪಸರಿಬ್ಬರೂ ನಿಜವಾಗಿಯೇ ನಮ್ಮ ಮಗಳ ರೂಪಕ್ಕೆ ಮೋಹಿಸಿ, ಒಬ್ಬರೊಬ್ಬರಿಗೆ ತಿಳಿಯದೆ ರಹಸ್ಯದಲ್ಲಿ ತಮ್ಮ ಕಾರ್ಯಸಿದ್ಧಿಗಾಗಿ ಯತ್ನಿಸಿದ್ದರೂ ಇರಬಹುದು. ಇಬ್ಬರೂ ಮಹಾತಪಸ್ವಿಗಳು! ಅವರಿಬ್ಬರೂ

ಆಶೋತ್ತರವನ್ನಿಟ್ಟುಕೊಂಡು ಹೋಗಿರುವರು. ಅವರಲ್ಲಿ ಯಾರನ್ನು ತಿರಸ್ಕರಿಸಬಹುದು? ನಮಗಿರುವವಳೋ ಒಬ್ಬಳೇ ಮಗಳು! ಅವಳನ್ನು ಒಬ್ಬನಿಗೆ ಕೊಟ್ಟರೆ, ಮತ್ತೊಬ್ಬನಿಗೆ ಕೋಪವುಂಟಾಗುವುದೇನೋ ಸಹಜವು! ನಮ್ಮಿಬ್ಬರಲ್ಲಿ ಯಾರಾದರೂ ಒಬ್ಬರು ಆಡಿದ ಮಾತಿಗೆ ತಪ್ಪಿದಂತೆಯೂ ಆಗುವುದು. ಅವರಿಬ್ಬರ ಮನಸ್ಸಿಗೂ ಅಸಮಾಧಾನವಿಲ್ಲದೆ, ನಾವೂ ದೋಷಭಾಗಿಗಳಾಗದೆ ಇರುವುದಕ್ಕೆ ಈಗ ಯಾವ ಉಪಾಯವನ್ನು ಮಾಡಬಹುದು.! (ಸ್ವಲ್ಪಹೊತ್ತಿನವರಗೆ ಆಲೋಚಿಸಿ) ಪ್ರಿಯೆ! ಈವಿಚಾರದಲ್ಲಿ ನನಗೊಂದುಪಾಯವು ತೋರಿರುವುದು. ನಾಳೆ ಆ ನಾರದಪರ್ವತರಿಬ್ಬರಿಗಾಗಿಯೇ ಸ್ವಯಂವರವನ್ನೇರ್ಪಡಿಸುವೆವು. ನಮ್ಮ ಕುಮಾರಿಯು ಅವರಿಬ್ಬರಲ್ಲಿ ತನ್ನಮನಸ್ಸಿಗೊಪ್ಪಿದವನನ್ನು ವರಿಸಲಿ! ಆಗ ನಮ್ಮಮೇಲಿನ ಭಾರವು ತಪ್ಪುವುದು. ತಮ್ಮ ರೂಪಸಂಪತ್ತಿಯಿಂದ, ಕನ್ಯೆಯ ಮನಸ್ಸನ್ನು ಮೋಹಗೊಳಿಸತಕ್ಕ ಭಾರವು ಅವರಮೇಲೆಯೇ ಬೀಳುವುದು! ಇದೇ ಈಗ ನನಗೆ ಕಾಲೋಚಿತವಾದ ಉಪಾಯವೆಂದು ತೋರುವುದು. ನಿನ್ನ ಅಭಿಪ್ರಾಯವೇನು ಹೇಳು!

ರಾಣಿ—ಇದರಮೇಲೆ ನಾನು ಹೇಳತಕ್ಕದ್ದೇನಿದೆ?

ರಾಜಂ—ಹಾಗಿದ್ದರೆ ಬಾ ಹೋಗುವೆವು! ಆಮಹರ್ಷಿಗಳಿಬ್ಬರೂ ಇಷ್ಟರಲ್ಲಿ ಸ್ನಾನವನ್ನು ಮುಗಿಸಿಕೊಂಡು ಬಂದಿರಬಹುದು.ಅವರಿಗೆ ಆತಿಥ್ಯವನ್ನು ನಡೆಸಿದಮೇಲೆ, ನಾವೇ ವಿನಯಪೂರ್ವಕವಾಗಿ ಈ ವಿಚಾರವನ್ನು ತಿಳಿಸಿಬಿಡುವೆವು. (ಎಂದುಹೋಗುವರು,)

ಇದು ಮೂರನೆಯ ಅಂಕವು.

## ಚತುರ್ಥಾಂಕವು.

ಆಸ್ಥಾನ:—ಪುರವೀಥಿ

(ನಾರದನು ಆಶಾಭಂಗದಿಂದ ಚಿಂತಾಕುಲನಾಗಿ ಪ್ರವೇಶಿಸುವನು.)

ನಾರದಂ—(ಕೈಹಿಸುಕುತ್ತ) ಆಹಾ ! ಎಂತಹ ಮೋಸವಾಯಿತು ! ನಾನು ಮಾಧ್ಯಾಹ್ನಿಕಕ್ಕಾಗಿ ನದಿಗೆ ಹೋಗಿ ಬರುವಷ್ಟರಲ್ಲಿ, ಆ ಪರ್ವತನು ಏನೋ ಕಪಟತಂತ್ರವನ್ನು ಮಾಡಿ ನನ್ನ ಉದ್ದೇಶಕ್ಕೆ ಭಂಗವನ್ನು ತಂದುಬಿಟ್ಟನಲ್ಲಾ! ಆ ಪರ್ವತನಿಗೂ, ಹೀಗೆ ಸ್ತ್ರೀಮೋಹವು ಹುಟ್ಟುವುದೆಂದು ನಾನೆಂದಿಗೂ ಎಣಿಸಿರಲಿಲ್ಲ. ಪರ್ವತನು ಆಗ ಉದ್ಯಾನದಿಂದ ಏಕಾಕಿಯಾಗಿ ಎದ್ದು ಹೊರಟುಹೋದಾಗಲೇ ನನಗೆ ಸಂದೇಹವು ಹುಟ್ಟಿತು. ಅವನು ಆಗಿನಿಂದ ನನ್ನ ಕಣ್ಮರೆಯಾಗಿ ತಿರುಗುತ್ತಿರುವುದಕ್ಕೂ ಈಗ ಕಾರಣವು ಸ್ಪಷ್ಟವಾಯಿತು! ಆಪರ್ವತನು ನನ್ನೊಡನೆ ಸ್ಪರ್ಧೆಗೆ ನಿಂತು, ಕಲಹವನ್ನೆಬ್ಬಿಸಿರುವುದರಿಂದಲೇ, ರಾಜನು ನಾಳೆ ನಮ್ಮಿಬ್ಬರಿಗಾಗಿ ಸ್ವಯಂವರವನ್ನೇರ್ಪಡಿಸುವುದಾಗಿ ಹೇಳಿರುವನು. ಮುಖ್ಯವಾಗಿ ನಾನು ಮಾಡಿದುದು ತಪ್ಪು ! ರಾಜನು ತನ್ನ ಮಗಳನ್ನು ನನಗೆ ವಿವಾಹಮಾಡಿಕೊಡುವ ವಿಷಯದಲ್ಲಿ ಸ್ವಲ್ಪಮಾತ್ರ ಸಮ್ಮತಿಯನ್ನು ತೋರಿಸಿದಮಾತ್ರಕ್ಕೆ, ಅಲ್ಪಸಂತೋಷಿಯಾದ ನಾನು, ಅಷ್ಟರಲ್ಲಿಯೇ ತೃಪ್ತನಾಗಿ ಬಂದುಬಿಟ್ಟೆನು. ಆಗಲೇ ನಾನು ಆರಾಜನಿಂದ ಇನ್ನೂ ದೃಢವಾದ ವಾಗ್ದಾನವನ್ನು ಪಡೆದು ಬಂದಿದ್ದರೆ, ಇಷ್ಟಕ್ಕೆ ಅವಕಾಶವಾಗುತ್ತಿರಲಿಲ್ಲ. ಅಥವಾ ಕಾರ್ಯಸಿದ್ಧಿಯಾಗುವವರೆಗೆ ನಾನು ಆರಾಜನ ಹಿಂದೆಯೇ ತಿರುಗುತಿದ್ದರೂ, ಅವನ ಮನಸ್ಸನ್ನು ಕೆಡಿಸುವುದಕ್ಕೆ ಪರ್ವತನಿಗೆ ಅವಕಾಶವು ಸಿಕ್ಕುತ್ತಿರಲಿಲ್ಲ. ಮುಖ್ಯವಾಗಿ ನಾನು ಈ ಸಮಯದಲ್ಲಿ ಮಾಧ್ಯಾಹ್ನಿಕ

ಕ್ಕಾಗಿ ನದಿಗೆ ಹೋದುದೇ ತಪ್ಪಾಯಿತು. ಮಾಧ್ಯಾಹ್ನಿಕವನ್ನು ನಂಬಿ ನಾನು ಮೋಸಹೋದೆನು. ಆ ಮಾಧ್ಯಾಹ್ನಿಕವೇ ನನ್ನನ್ನು ಕೆಡಿಸಿತು! ಆ ವೈದಿಕಮಾರ್ಗಕ್ಕೂ, ಈ ಕಾಮಮಾರ್ಗಕ್ಕೂ ಸಂಬಂಧವೆಲ್ಲಿ! ಯೋಗಿಗಳ ಮಾರ್ಗವೇ ಬೇರೆ! ಭೋಗಿಗಳ ಮಾರ್ಗವೇಬೇರೆ ! ಅದಕ್ಕೂ ಇದಕ್ಕೂ ಗಂಟುಹಾಕಿದರೆ ಸರಿಬೀಳುವುದೆ? ಇದರಿಂದ ನಾನು ಆಶಾಭಂಗಕ್ಕೂ ಅಪಹಾಸ್ಯಕ್ಕೂ ಗುರಿಯಾಗುವಂತಾಯಿತಲ್ಲಾ ! ಇದಕ್ಕೇನು ಮಾಡಲಿ ಅಥವಾ ಇರಲಿ ! ಈಗ ನಾನು ಕೈಹಿಡಿದ ಕಾರ್ಯಕ್ಕೆ ಇವೆಲ್ಲವೂ ಸಹಜವಾದ ಲಕ್ಷಣಗಳೇ ಆಗಿರುವುವು. ಇದಕ್ಕಾಗಿ ಚಿಂತೆಯೇಕೆ ? ಕಾಮಿಗಳ ಅವಸ್ಥೆಯೇ ಈ ವಿಧವಾದುದು !

ಕಂ. ಅವಮಾನಕ್ಕೀಡಾಗದೆ ।
ಯವಿರತಚಿಂತಾಗ್ನಿಯಿಂದೆ ಬೇಯದೆ ವಿಘ್ನ।
ವ್ಯವಧಿಯೊಳಳಲದೆ ಕಾಮುಕ ।
ನಿವಹಕ್ಕೆ ನಿಜೇಷ್ಟಸಿದ್ಧಿ ಸುಖದಿಂದಹುದೇ ?

ಆದುದರಿಂದ ಈಗ ನಾನು ಹಿಡಿದ ಕಾರ್ಯದಲ್ಲಿ ಎಷ್ಟೇ ಅವಮಾನವಾದರೂ ಆಗಲಿ ! ಎಷ್ಟೇ ವಿಘ್ನಗಳು ಬಂದರೂ ಬರಲಿ! ಎಷ್ಟೇ ವಿಧದಲ್ಲಿ ಆಶಾಭಂಗವಾದರೂ ಆಗಲಿ ! ಹಿಂತೆಗೆಯಬಾರದು ! ರಾಜನು ನಮಗೆ ಮಾಡಬೇಕಾದ ಆತಿಥ್ಯವನ್ನು ಮುಗಿಸಿ, ಸ್ವಯಂವರಪ್ರಸ್ತಾವನ್ನು ಹೇಳಿದಕೂಡಲೆ, ಪರ್ವತನು, ಅಲ್ಲಿ ನಿಮಿಷಮಾತ್ರವೂ ನಿಲ್ಲದೆ ಹೊರಟುಹೋದನು. ಅವನಿಗೂ ನನ್ನಂತೆ ಆಶಾಭಂಗವುಂಟಾದುದಕ್ಕಾಗಿ ನಾಚಿಕೆಯಿಂದ ನನಗೆ ಮುಖವನ್ನು ತೋರಿಸಲಾರದೆ ಹೊರಟುಹೋದನೋ, ಇಲ್ಲವೇ ಬೇರೆ ಯಾವುದಾದರೂ ಕಾರ್ಯೋದ್ದೇಶದಿಂದ ಹೋದನೋ ತಿಳಿಯುವುದಕ್ಕಿಲ್ಲ. ಹೇಗಾದರೂ ಇರಲಿ ! ನಾನೂ ಅದನ್ನೇ ಬಯಸುತಿದ್ದೆನು. ಈಗನಾನು ನಾಳೇ ಸ್ವಯಂವರಕಾಲದಲ್ಲಿ ಶ್ರೀಮತಿಯು ಅವನನ್ನು ವರಿಸದಹಾಗೆ ಮಾಡಬೇಕು. ಇದಕ್ಕೇನುಪಾಯವನ್ನು ಮಾಡಲಿ!

(ಚಿಂತೆಯನ್ನು ನಟಿಸಿ) ಓಹೋ ತಿಳಿಯಿತು! ಈಗಲೇ ನಾನು ಕ್ಷೀರಾಬ್ಧಿಗೆ ಹೋಗಿ, ನನ್ನ ವೀಣಾಗಾನದಿಂದ ಭಗವಂತನನ್ನೊಲಿಸಿ, ಆ ಸ್ವಯಂವರಕಾಲದಲ್ಲಿ ಪರ್ವತನ ಮುಖವು ಕೇವಲ ವಿಕೃತವಾಗಿ ಕಾಣುವಂತೆ ವರವನ್ನು ಪಡೆದು ಬರುವೆನು. ಪರ್ವತನು ತನ್ನ ಚೇಷ್ಟೆಗೆ ತಕ್ಕ ಫಲವನ್ನನುಭವಿಸಲಿ ! ಪರ್ವತನೂ ಇತ್ತಲಾಗಿಯೇ ಬರುತ್ತಿರಬಹುದು. ಅವನ ಕಣ್ಣಿಗೆ ಬಿಳದೆ ಈಮಾರ್ಗವಾಗಿ ಹೊರಟುಹೋಗುವೆನು.

(ಎಂದು ಹೋಗುವನು.

(ಪರ್ವತನು ಪ್ರವೇಶಿಸುವನು.)

ಪರ್ವತಂ—(ಆಶ್ಚರ್ಯದಿಂದ ನಗುತ್ತ) ಆಹಾ ! ಮೋಹಪಾಶವೆಂಬುದು ಎಂತವರನ್ನೂ ಬಿಟ್ಟುದಲ್ಲ ! ನನಗೆ ಆಗಾಗ ವಿರಕ್ತಿಮಾರ್ಗದಲ್ಲಿ ಎಚ್ಚರಿಸುತಿದ್ದ ನಾರದನು,ನನಗೆ ಮೊದಲೇ ಈ ಕಾಮಮಾರ್ಗದಲ್ಲಿ ಪ್ರವರ್ತಿಸಿರುವಾಗ, ನನ್ನ ವಿಷಯಕ್ಕಾಗಿ ನಾನು ಪರಿತಪಿಸಬೇಕಾದುದೇನು ? ಈ ಪ್ರಯತ್ನದಲ್ಲಿ ನಾರದನಿಗೂ ನನಗೂ ಇದ್ದ ಪರಸ್ಪರಸ್ನೇಹಕ್ಕೆ ಭಂಗವುಂಟಾಗುವುದರಲ್ಲಿ ಸಂದೇಹವಿಲ್ಲ. ಆದರೇನು ?ಈಗ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಕಾರ್ಯವನ್ನು ಕೆಡಿಸಿಕೊಳ್ಳಬಾರದು. ನಮ್ಮಿಬ್ಬರ ಪ್ರಯತ್ನವನ್ನು ನೋಡಿ ರಾಜನು ಏನೇನೋ ಉಪಾಯದಿಂದ ತಾನು ಮಾತಿಗೆ ಸಿಕ್ಕದೆ, ಸ್ವಯಂವರವೆಂಬ ವ್ಯಾಜವನ್ನಿಟ್ಟು ನಮ್ಮಮೇಲೆಯೇ ಭಾರವನ್ನು ಹೊರಿಸಿಬಿಟ್ಟನು. ಕಾರ್ಯಭಾರವು ಈಗ ನಮ್ಮಮೇಲೆ ಬಿದ್ದಿತು. ಮುಖ್ಯವಾಗಿ ನಾಳೆ ಸ್ವಯಂವರದಲ್ಲಿ ಶ್ರೀಮತಿಯು ನಾರದನನ್ನು ವರಿಸದಹಾಗೆ ಮಾಡುವುದಕ್ಕೆ ಉಪಾಯವನ್ನು ಹುಡುಕಬೇಕು. ಇದಕ್ಕೇನು ಮಾಡಲಿ ! (ಎಂದು ಯೋಚಿಸುತ್ತ) ಓಹೋ ತಿಳಿಯಿತು ! ಈಗಲೇ ನಾನು ಶ್ರೀವಿಷ್ಣುಸಾನ್ನಿಧ್ಯಕ್ಕೆ ಹೋಗಿ, ಭಕ್ತವತ್ಸಲನಾದ ಭಗವಂತನನ್ನೊಲಿಸಿ, ನಾಳೆ ಸ್ವಯಂವರಕಾಲದಲ್ಲಿ ನಾರದನ ಮುಖವನ್ನು ನೋಡಿಮಾತ್ರಕ್ಕೆ ಶ್ರೀಮತಿಗೆ ಅಸ

ಹ್ಯವುಂಟಾಗುವಂತೆ ವರವನ್ನು ಪಡೆದುಬರುವೆನು. ಈ ಸಂದರ್ಭದಲ್ಲಿಸ್ವಕಾರ್ಯಸಾಧನೆಯೊಡನೆ ಆ ನಾರದನಿಗೆ ದೊಡ್ಡ ಅವಮಾನವನ್ನೂ ಉಂಟುಮಾಡದಿದ್ದರೆ ನಾನು ಪರ್ವತನೆ? ಇನ್ನು ಕಾಲ ವಿಳಂಬವು ಸಾಕು! (ಹೋಗುವನು.)

ಆಸ್ಥಾನ -ಕ್ಷೀರಾಬ್ಧಿ.

(ಮಹಾವಿಷ್ಣುವು ಶೇಷಶಯನದಲ್ಲಿ ಲಕ್ಷ್ಮೀದೇವಿಯೊಡನೆ ಪಗಡೆಯನಾಡುತ್ತಿರುವನು.)

ರಾಗ - ತಾಳ.

ವಿಷ್ಣು — ನೋಡು ನೋಡೆಲೆ । ನೀರಜಾಕ್ಷಿ ನಾ । ನಾಡುವಾಟವ॥ ನೀಗಲೆ ॥
ಕಾಂತೆಯೆನ್ನೊಳ । ಗಿಂತು ಪಂಥವ । ನಾಂತು ನೀ ಜೈಸುವ । ಚಿಂತೆಯ ಬಿಡುಬಿಡು ॥

ಲಕ್ಷ್ಮಿ — ನೋಡಲೇಕೆ । ಬಲ್ಲೆ ನಿನ್ನ । ಗಾಡಿತನವನು ॥ ಕಾಂತಕೇಳ್ ॥
ಕಾಲಸೂತ್ರದ । ಜಾಲದಿಂ ಭುವ । ನಾಳಿಯನಾಡಿಪ । ಲೀಲೆಯಿದಲ್ಲವು ॥

ವಿಷ್ಣು — ಸುಂದರೀಮಣಿ । ಮುಂದೆ ನೋಡಿದೊ ।
ಕೊಂದೆನು ಕಾಯ್ಗಳ । ಹಿಂದಕೆ ತೆಗೆತೆಗೆ ॥

ಲಕ್ಷ್ಮಿ — ಎಲ್ಲ ಲೋಕವ । ಕೊಲ್ಲುವ ಸಾಸವು।
ಸಲ್ಲದೀ ಯಾಟದೊಳ್ । ಬಲ್ಲೆನಾಂ ಬಿಡುಬಿಡು॥

(ಶ್ರೀವಿಷ್ಣುವಿನ ಮುಖದಲ್ಲಿ ಅಕಾರಣಹಾಸ್ಯವನ್ನು ನೋಡಿ ಲಕ್ಷ್ಮಿಯು ಆಟವನ್ನು ನಿಲ್ಲಿಸಿ.)

ಲಕ್ಷ್ಮಿ — ನಾಥಾ! ಇದೇನು? ನಿಷ್ಕಾರಣವಾಗಿ ನಗುವುದೇಕೆ?

ವಿಷ್ಣು — ನಗುವುದಕ್ಕೆ ಕಾರಣವುಂಟು.

ಲಕ್ಷ್ಮಿ — ಏನದು? ಅದನ್ನು ನನಗೂ ತಿಳಿಸಬಾರದೆ?

ವಿಷ್ಣು — ಮುಂದೆ ನಿನಗೆ ಆ ವಿಚಾರವು ತಾನಾಗಿಯೇ ಗೊತ್ತಾಗುವುದು. ಅದೊಂದು ರಹಸ್ಯವಾದ ಸಂಗತಿ!

ಲಕ್ಷ್ಮಿ — ನಾಥಾ! ನಿನಗೆ ನನ್ನಲ್ಲಿಯೂ ಮರೆಸಿಡತಕ್ಕ ರಹಸ್ಯವುಂಟೆ? ನೀನು ಹೇಳದೆ ಮರೆಸಿದಷ್ಟೂ, ನನಗೆ ಅದನ್ನು ಕೇಳಿಯೇ ತೀರ ಬೇಕೆಂಬ ಹಟವೂ, ಕುತೂಹಲವೂ ಹೆಚ್ಚುತ್ತಿರುವುದು. ಅದೇನು ಹೇಳು.

ವಿಷ್ಣು — ಪ್ರಿಯೆ! ನಾರದ ಪರ್ವತರೆಂಬ ಮಹರ್ಷಿಗಳಿಬ್ಬರೂ ಪರಮ ವೈರಾಗ್ಯ ನಿಷ್ಠರೆಂಬುದನ್ನು ನೀನೂ ಕೇಳಿ ಬಲ್ಲೆಯಷ್ಟೆ.

ಲಕ್ಷ್ಮಿ — ಅಹಾ! ಚೆನ್ನಾಗಿ ಕೇಳಿಬಲ್ಲೆನು. ಜಿತೇಂದ್ರಿಯರೆಂದರೆ ಅವರಿಗೇ ಸಲ್ಲುವುದು.

ವಿಷ್ಣು — ಅವರಿಬ್ಬರೂ ಒಂದು ಸ್ತ್ರೀವ್ಯಕ್ತಿಯನ್ನು ನೋಡಿ ಮೋಹಿತರಾಗಿ ರುವರು. ಅವಳನ್ನು ಹೇಗಾದರೂ ವಿವಾಹವಾಗಬೇಕೆಂಬ ಉದ್ದೇಶದಿಂದ ಇಬ್ಬರೂ ಯತ್ನಿಸುತ್ತಿರುವರು. ಈ ಹೆಣ್ಣಿನ ವಿಚಾರವಾಗಿಯೇ, ಆಬಾಲ್ಯಸ್ನೇಹದಿಂದ ಏಕದೇಹದಂತಿದ್ದ ಅವರವರಲ್ಲಿಯೇ ಅಂತಃಕಲಹವುಂಟಾಗಿ, ಒಬ್ಬರನ್ನೊಬ್ಬರು ವಂಚಿಸುವುದಕ್ಕೂ ಉಪಾಯವನ್ನು ಹುಡುಕುತ್ತಿರುವರು.

ಲಕ್ಷ್ಮಿ — (ಆಶ್ಚರ್ಯದಿಂದ) ಏನಿದು! ಅಂತಹ ಪರಮವಿರಕ್ತರೂ ಕಾಮ ಪಾಶದಲ್ಲಿ ಕಟ್ಟುಬಿದ್ದರೆ? ನಾಥಾ! ಸ್ತ್ರೀಯರ ಪ್ರಭಾವವನ್ನು ನೋಡಿದೆಯಾ? ಎಷ್ಟೇ ಧೀರರನ್ನಾದರೂ ಆಕರ್ಷಿಸತಕ್ಕ ಶಕ್ತಿಯು ನಮ್ಮಲ್ಲಿರುವುದು. ಸ್ತ್ರೀವಶ್ಯನಲ್ಲದ ಪುರುಷನೊಬ್ಬನೂ ಇಲ್ಲವೆಂಬುದು ಈಗಲಾದರೂ ನಿನಗೆ ವ್ಯಕ್ತವಾಯಿತೆ?

ವಿಷ್ಣು — ಪ್ರಿಯೆ! ಇದು ಸ್ತ್ರೀಯರ ಪ್ರಭಾವವಲ್ಲ! ನನ್ನ ಮಾಯೆಯ ಪ್ರಭಾವವೆಂದು ತಿಳಿ!

ಲಕ್ಷ್ಮಿ — ನಾಥಾ! ಹಾಗಿದ್ದರೂ, ಆ ನಿನ್ನ ಮಾಯೆಗೂ ಸ್ತ್ರೀಲಿಂಗಸಂಬಂಧದಿಂದಲೇ ಈ ವಶೀಕರಣಶಕ್ತಿಯುಂಟಾಗಿರಬೇಕು.

ವಿಷ್ಣು — ಪ್ರಿಯೆ! ಇಷ್ಟುಮಾತ್ರಕ್ಕಾಗಿಯೇ ನೀನು ನಿಮ್ಮ ಸ್ತ್ರೀಜಾತಿಯ ಹೆಮ್ಮೆಯನ್ನು ಹೇಳಿಕೊಳ್ಳಬೇಡ! ಆ ಸ್ತ್ರೀಯರೇ ಮಹಾನರ್ಥಕ್ಕೆ ಮೂಲವೆಂಬುದನ್ನೂ, ಆ ಸ್ತ್ರೀ ಮೋಹಪಾಶದಲ್ಲಿ ಸಿಕ್ಕಿಬಿದ್ದವರ

ಸ್ಥಿತಿಯು ಲೋಕದಲ್ಲಿ ಕೇವಲ ಹಾಸ್ಯಾಸ್ಪದವಾಗುವುದೆಂಬು ದನ್ನೂ ನೀನು, ಇನ್ನು ಸ್ವಲ್ಪಕಾಲದೊಳಗಾಗಿ, ಈ ನಾರದ ಪರ್ವತರ ದೃಷ್ಟಾಂತದಿಂದಲೇ ತಿಳಿಯಬಹುದು.

ಲಕ್ಷ್ಮಿ— (ನಗುತ್ತ) ಸ್ತ್ರೀಯರು ಅನರ್ಥಹೇತುಗಳೆಂಬುದು ಹಾಗಿರಲಿ ಪುರುಷೋತ್ತಮನೆನಿಸಿಕೊಂಡ ನೀನು, ಈಗ ನಿನ್ನ ಭಕ್ತರಾದ ನಾರದಪರ್ವತರನ್ನೇ ಹೀಗೆ ಮಾಯಾಪಾಶದಲ್ಲಿ ಕಟ್ಟಿ, ಅಪಹಾ ಸ್ಯಕ್ಕೆ ಗುಡಿಮಾಡಿದಮೇಲೆ ಪುರುಷರನ್ನು ಹೇಗೆ ನಂಬಬಹುದು?

ವಿಷ್ಣು— ದೇವಿ! ಹಾಗಿಲ್ಲ! ಮನುಷ್ಯನಲ್ಲಿ ಎಷ್ಟೇ ಗುಣಗಳಿದ್ದರೂ, ಅದ ರಿಂದ ಅವನ ಮನಸ್ಸಿನಲ್ಲಿ ಹೆಮ್ಮೆಯುಂಟಾದಾಗ,ಅದನ್ನಡಗಿಸಿ, ಅವನನ್ನು ಸನ್ಮಾರ್ಗದಲ್ಲಿರಿಸಬೇಕಾದುದು ನನ್ನ ಸಂಕಲ್ಪವು. ಅದರಂತೆಯೇ ಈಗ ನಾರದಪರ್ವತರಿಗೆ ತಾವೇ ಪರಮವಿರಕ್ತ ರೆಂಬ ಹೆಮ್ಮೆಯು ಅಂಕುರಿಸುತ್ತಿರುವುದನ್ನು ನೋಡಿ, ಅದನ್ನಡ ಗಿಸುವುದಕ್ಕಾಗಿ ನಾನು ಹೀಗೆ ಮಾಡಬೇಕಾಯಿತೇ ಹೊರತು ಬೇರೆಯಲ್ಲ! ಇದಲ್ಲದೆ ಮುಂದೆ ಇದರಿಂದ ಲೋಕಕ್ಷೇಮಕರ ವಾದ ಮತ್ತೊಂದುಕಾರ್ಯವೂ ನಡೆಯಬೇಕಾಗಿರುವುದು.

(ತೆರೆಯಲ್ಲಿ ಗಾನಧ್ವನಿ)

(ನಾರದನು ಗಾನನರ್ತನಗಳೊಡನೆ ಸ್ತುತಿಸುತ್ತ ಬರುವನು.)

ರಾಗ - ತಾಳ.

ನಾರಾಯಣ | ನಿಖಿಲಲೋಕ | ಕಾರಣ ಕರು | ಣಾಕರ |
ನೀರೇರುಹ|ದಳಲೋಚನ | ನಿರವಧಿಗುಣ| ಭೂಷಣ||
ದೇವಾದಿದೇವ ಹರೀ | ಶ್ರೀವರ ಶೌರೀ |
ಪಾವನ ಗುಣ| ಪಾಪಹಾರೀ | ಕಾವುದೈ ಮುರಾರೀ ||
ವಂದಾರುಜ| ನಾನಂದನ | ಚಂದ್ರಸೂರ್ಯಲೋಚನ |
ಕುಂದಕುಸುಮರುಚಿಸಮಾನ | ಮಂದಹಾಸವದನ ||

ನಾರದಂ—ದೇವಾ! ವಂದಿಸುವೆನು.

ವಿಷ್ಣು — ಮುನೀಂದ್ರಾ ! ಸುಖಾಗಮನವೆ ! ಇದೇನು ? ಆಕಸ್ಮಿಕವಾಗಿ ನೀನಿಲ್ಲಿಗೆ ಬರಲು ಕಾರಣವೇನು ? ವಿಶೇಷವೇನೂ ಇಲ್ಲವಷ್ಟೆ ?

ನಾರದಂ—ದೇವಾ ! ಈಗ ನಾನೊಂದು ಅವಶ್ಯಕಾರ್ಯವನ್ನುದ್ದೇಶಿಸಿಯೇ ನಿನ್ನಲ್ಲಿಗೆ ಬಂದಿರುವೆನು. ಭಕ್ತವತ್ಸಲನಾದ ನೀನು ನನ್ನ ಉದ್ದೇಶವನ್ನು ಈಡೇರಿಸಿಕೊಡಬೇಕು.

ವಿಷ್ಣು — ನಾರದಮುನೀಂದ್ರಾ ! ಸಂಕೋಚವೇಕೆ ? ನಿನ್ನ ಅಭಿಮತವನ್ನು ತಿಳಿಸು. ಅವಶ್ಯವಾಗಿ ನಡೆಸಿಕೊಡುವೆನು. ಇದಕ್ಕಾಗಿ ಇಷ್ಟೊಂದು ಪೂರ್ವಪೀಠಿಕೆಯೇಕೆ ?

ಕಂ ॥ ಮನವೊಲ್ದು ಭಜಿಪ ಭಕ್ತರ
ಮನೋಭಿಮತಸಿದ್ಧಿಗೆಡೆಯನೀಯದಿರಲ್ ಮೇ
ದಿನಿಯೊಳ್ ಭಕ್ತಪರಾಧೀ
ನನೆಂಬ ಬಿರುದೆನಗೆ ವಿಫಲಮಾಗದೆ ಪೇಳಾ ॥

ಆದುದರಿಂದ ನಾನು ತಪ್ಪದೆ ನಿನ್ನ ಉದ್ದೇಶವನ್ನೀಡೇರಿಸಿ ಕೊಡುವೆನು. ನಿಸ್ಸಂಕೋಚವಾಗಿ ಕೇಳಬಹುದು.

ನಾರದಂ—ದೇವಾ ! (ಸಂಕೋಚದಿಂದ) ಅಂಬರೀಷಮಹಾರಾಜನಿಗೆ ಶ್ರೀಮತಿಯೆಂಬ ಕನ್ಯೆಯೊಬ್ಬಳಿರುವಳು. ನಾನು ಸಂಚಾರವಶದಿಂದ ಆ ರಾಜನ ಪಟ್ಟಣಕ್ಕೆ ಹೋದಾಗ, ಆಕಸ್ಮಾತ್ತಾಗಿ ಅವಳನ್ನು ನೋಡಿದೆನು. ಅವಳ ರೂಪಲಾವಣ್ಯಗಳಿಗೆ ಮೋಹಿತನಾಗಿ, ಅವಳನ್ನು ವಿವಾಹಮಾಡಿಕೊಳ್ಳಬೇಕೆಂಬ ಆಸೆಯಿಂದ ನಾನು ರಾಜನನ್ನು ಕೇಳಿಕೊಂಡೆನು. ರಾಜನು ನನ್ನ ಪ್ರಾರ್ಥನೆಯನ್ನು ನಡೆಸಿಕೊಡುವುದಾಗಿ ವಾಗ್ದಾನಮಾಡುವಷ್ಟರಲ್ಲಿ, ನನ್ನೊಡನೆ ಬಂದಿದ್ದ ಪರ್ವತನೂ, ಆ ಕನ್ಯೆಯಮೇಲೆ ಕಣ್ಣಿಟ್ಟು, ಆಕೆಯನ್ನು ತನಗೆ ವಿವಾಹಮಾಡಿಕೊಳ್ಳಬೇಕೆಂದು ಪ್ರಯತ್ನಿಸಿದನು. ರಾಜನು ನಮ್ಮಿಬ್ಬರಲ್ಲಿ, ಯಾರನ್ನೂ ನಿರಾಕರಿಸಲಾರದೆ, ನಾಳೆ ನಮ್ಮಿಬ್ಬರಿಗಾಗಿಯೇ ಸ್ವಯಂವರವನ್ನೇರ್ಪಡಿಸಿ

ರುವನು. ಆ ಸ್ವಯಂವರಕಾಲದಲ್ಲಿ ಶ್ರೀಮತಿಯು ಪರ್ವತನನ್ನು ವರಿಸದಹಾಗೆ ಮಾಡಬೇಕು. ಇಷ್ಟೇ ನನ್ನಪ್ರಾರ್ಥನೆ !

ವಿಷ್ಣು—(ಆಶ್ಚರ್ಯವನ್ನು ನಟಿಸುತ್ತ) ಆಹಾ ! ನಾರದಾ ! ಇದೇನು ? ದೇವಸಭೆಯಲ್ಲಿ ರಂಭಾದ್ಯಪ್ಸರಸ್ತ್ರೀಯರ ಗಾನನರ್ತನಗಳನ್ನು ನೋಡುವಾಗಲೂ, ಅವರ ರೂಪಕ್ಕೆ ಮೋಹಿಸದೆ ಜಿತೇಂದ್ರಿಯ ನಾಗಿದ್ದ ನಿನ್ನನ್ನೂ ಮೋಹಪಾಶದಲ್ಲಿ ಸಿಕ್ಕಿಸಬೇಕಾದರೆ ಆಕನ್ಯೆ ಯ ಪ್ರಭಾವವು ಲೋಕಾದ್ಭುತವಾಗಿರಬೇಕಲ್ಲವೆ ?

ನಾರದಂ—ದೇವಾ! ಅದನ್ನು ಹೇಳಿ ಪ್ರಯೋಜನವೇನು,

ಕಂ ॥ ಸುರರ್ಗಮೃತಮನೀವೆಡೆಯೊಳ್
ಹರನಂ ವೃಕಬಾಧೆಯಿಂದೆ ತಪ್ಪಿಸುವೆಡೆಯೊಳ್
ಹರಿ ! ನೀಂ ಧರಿಸಿದ ನಾರೀ
ಸ್ವರೂಪಮೇ ಮತ್ತಮಿಲ್ಲಿಬಂದಂತಿರ್ಕ್ಕುಂ ॥

ವಿಷ್ಣು—ನಾರದಾ ! ಹಾಗಿದ್ದರೆ ನೀನು ಮೋಹಿಸಿದುದು ಯುಕ್ತವೇ ! ಇದಕ್ಕಾಗಿ ನನ್ನಿಂದಾಗಬೇಕಾದ ಸಹಾಯವೇನು ?

ನಾರದಂ—ಬೇರೇನೂ ಇಲ್ಲ ! ನಾಳೆ ಪರ್ವತನು ಸ್ವಯಂವರಮಂಟಪವ ನ್ನು ಪ್ರವೇಶಿಸಿದೊಡನೆ, ಆತನ ಮುಖವು ಕಪಿಯಂತೆ ಕಾಣಿಸಬೇ ಕು. ಇದೇ ನನ್ನ ಪ್ರಾರ್ಥನೆ!

ವಿಷ್ಣು—ನಾರದಾ ! ನಿನ್ನ ಇಷ್ಟದಂತೆಯೇ ಆಗಲಿ !

ನಾರದಂ—ದೇವಾ ! ಧನ್ಯನಾದೆನು. ನಿನಗೆ ಜಯವಾಗಲಿ ! ವಂದಿಸುವೆನು ನಾನು ಹೋಗಿಬರುವೆನು. (ಹಾಡುತ್ತ ಹೋಗುವನು.)

ವಿಷ್ಣು—ದೇವಿ ! ಕಾಮಿಗಳ ಸ್ವಭಾವವನ್ನು ನೋಡಿದೆಯಾ ! ಮನಸ್ಸಿನಲ್ಲಿ ಕಾಮವು ಅಂಕುರಿಸುವಾಗಲೇ, ಕ್ರೋಧ, ದ್ವೇಷ, ಮಾತ್ಸರ್ಯ, ಮೊದಲಾದ ದುರ್ಗುಣಗಳೆಲ್ಲವೂ ತಲೆಯೆತ್ತುವುವು. ಏಕದೇಹ ನ್ಯಾಯದಿಂದ ಅನ್ಯೋನ್ಯವಾಗಿದ್ದ ನಾರದಪರ್ವತರ ಸ್ನೇಹವು

ಯಾವರೀತಿಯಲ್ಲಿ ಪರಿಣಮಿಸಿತು ನೋಡು ! ಮಾತ್ಸರ್ಯದಿಂದ ಒಬ್ಬರನ್ನೊಬ್ಬರು ವಂಚಿಸುವುದಕ್ಕೆ ಯತ್ನಿಸಿರುವರು. ಇದೋ! ಈಗಲೇ ಪರ್ವತನೂ ಇದೇ ಉದ್ದೇಶದಿಂದ ನನ್ನಲ್ಲಿಗೆ ಬರುವನು ನೋಡು !

(ತೆರೆಯಲ್ಲಿ ಗಾನಧ್ವನಿ)

(ಪರ್ವತನು ಹರಿಕೀರ್ತನೆಯನ್ನು ಮಾಡುತ್ತ ಬರುವನು.)

ರಾಗ ಸುರಟಿ ತಾಳ.

ನಿರವಧಿಕರುಣಾ । ಶರನಿಧಿ ಪಾಲಿಸು । ಸರೋಜಭವನಮಿತಾ।
ಪರಾತ್ಪರ । ಪುರಾರಿಮುಖವಿನುತಾ ॥
ಜಲರುಹಲೋಚನ । ಜಹ್ನುಸುತಾಪಿತ ।
ಕಲಿಮಲಭಂಜನ । ಕರಿವರದಾ ॥
ವಿಲಸಿತಮುನಿಜನ । ಮಾನಸರಂಜನ । ಮನೋಜ್ಞಗುಣಶರಣಾ ॥
ನಿರಂಜನ । ವಿರೋಧಿಮದಹರಣಾ ॥
ಮಂಗಳಮಹಿಮ ಶ್ರೀ । ರಂಗ ಶುಭಾಂಗ ಭು ।
ಜಂಗಶಯನ ರವಿ । ಶಶಿನಯನಾ।
ಅಂಗಜಜನಕವಿ । ಹಂಗವರೇಣ್ಯತು । ರಂಗ ದುರಿತ ಭಂಗಾ ॥
ಕೃಪಾರಸ । ರಂಜಿತಸದಪಾಂಗಾ॥

ಪರ್ವತಂ—ದೇವಾ ! ವಂದಿಸುವೆನು.

ವಿಷ್ಣು —ಪರ್ವತಮುನೀಂದ್ರಾ ! ನೀನು ಆಕಸ್ಮಿಕವಾಗಿ ಇಲ್ಲಿಗೆ ಬಂದ ಕಾರ್ಯೋದ್ದೇಶವೇನು?

ಪರ್ವತಂ—ದೇವಾ ! ಲಾಲಿಸಬೇಕು. ನಾನೂ, ನಾರದನೂ, ಸಂಚಾರ ವಶದಿಂದ ಅಂಬರೀಷರಾಜನ ಪಟ್ಟಣಕ್ಕೆ ಹೋದೆವು.ಅಲ್ಲಿ ಆ ರಾಜನ ಮಗಳನ್ನು ಕಂಡುನಾನು ಮೋಹಿತನಾಗಿ, ಅವಳನ್ನು ನನಗೆ ವಿವಾಹಮಾಡಿಕೊಡಬೇಕೆಂದು ರಾಜನನ್ನು ಕೇಳಿದೆನು. ನಾರದನೂ ಇದೇ ಉದ್ದೇಶದಿಂದ ನನಗೆ ಮೊದಲೇ ಆರಾಜನನ್ನುಪ್ರಾ

ರ್ಥಿಸಿದಂತಿದೆ. ರಾಜನು ನಮ್ಮಿಬ್ಬರಲ್ಲಿ ಯಾರನ್ನೂ ತಿರಸ್ಕರಿಸ ಲಾರದೆ, ನಾಳೆ ನಮ್ಮಿಬ್ಬರಿಗಾಗಿಯೇ ಸ್ವಯಂವರವನ್ನೇರ್ಪಡಿ ಸಿರುವನು. ಇದಕ್ಕಾಗಿ ಈಗ ನಾನು ನಿನ್ನಲ್ಲಿ ಪ್ರಾರ್ಥಿಸುವುದೇ ನೆಂದರೆ,ಆ ಸ್ವಯಂವರಕಾಲದಲ್ಲಿ ನಾರದನ ಮುಖವು,ಆಕನ್ಯಕೆಗೆ ಕರಡಿಯಂತೆ ಕಾಣಬೇಕು. ಇದೇ ನನ್ನ ಕೋರಿಕೆ ?

ವಿಷ್ಣು—ಮುನೀಂದ್ರಾ ! ಪರಮಭಕ್ತನಾದ ನಿನಗೆ ಈ ಅಲ್ಪಕಾರ್ಯವನ್ನು ನಡೆಸಿಕೊಡುವುದೊಂದು ದೊಡ್ಡದೆ ! ನಿನ್ನ ಇಷ್ಟದಂತೆಯೇ ಆಗಲಿ ! ನನ್ನಲ್ಲಿ ಬಂದು ಮರೆಹೊಕ್ಕವರೊಬ್ಬರೂ ವಿಫಲಪ್ರ ಯತ್ನರಾಗಿ ಹೋಗಬಾರದು. ಆದರೆ ನಾರದನೂ ಇದೇ ಉದ್ದೇ ಶದಿಂದ ಬಂದು ನನ್ನಲ್ಲಿ ಪ್ರಾರ್ಥಿಸಿದರೆ, ಆಗ ನಾನು ಮಾಡಬೇ ಕಾದುದೇನೆಂದು ಯೋಚಿಸುವೆನು.

ಪರ್ವತಂ—ದೇವಾ ! ಆ ಚಿಂತೆಯು ನಿನಗೇಕೆ ? ಮೊದಲು ನಾರದನಿಗೆ ಈ ಯುಕ್ತಿಯೇ ತೋರಲಾರದು. ಅದನ್ನು ನಾನು ಬಲ್ಲೆನು.

ವಿಷ್ಣು—ಹಾಗಿದ್ದರೆ ಸರಿ ! ಇನ್ನು ನೀನು ಹೋಗಿ ಬಾ !

ಪರ್ವತಂ—ಧನ್ಯೋಸ್ಮಿ ! ನಿನಗೆ ಜಯವಾಗಲಿ !

(ಹೋಗುವನು)

ವಿಷ್ಣು—(ನಗುತ್ತ) ದೇವಿ ! ಈ ವಿನೋದಗಳನ್ನು ನೋಡಿದೆಯಲ್ಲವೆ? ಈ ನಾರದಪರ್ವತರಿಬ್ಬರ ಕಲಹದಲ್ಲಿ ಇವರಿಬ್ಬರ ಉದ್ದೇಶವೂ ಈ ಡೇರುವಹಾಗಿಲ್ಲ. ಇದರ ಫಲವನ್ನು ಪಡೆಯತಕ್ಕವನು ಮೂರ ನೆಯವನೊಬ್ಬನಿರುವನು. ಅದು ಮುಂದೆ ತಿಳಿಯುವುದು.

ಲಕ್ಷ್ಮಿ—ದೇವಾ ! ವೇದಾಂತಿಗಳು ನಿನ್ನನ್ನಲ್ಲವೇ ಸರ್ವಫಲಭಾಗಿಯೆಂ ದು ಹೇಳುವರು. ಆ ಫಲವನ್ನನುಭವಿಸತಕ್ಕ ಮೂರನೆಯವನು ನೀನೇ ಆಗಿರಬಾರದೇನು ?

ವಿಷ್ಣು—ದೇವಿ ! ದೈವೇಚ್ಛೆಯಿದ್ದಂತೆ ನಡೆಯುವುದು. ಈಗ ನಮಗೆ ಆ ವಿಚಾರವೇಕೆ ? (ತೆರೆಯು ಬೀಳುವುದು.)

## ಪಂಚಮಾಂಕವು

ಆಸ್ಥಾನ:—ಸ್ವಯಂವರಮಂಟಪ.

(ಕರಡಿಯ ಮುಖದಿಂದ ನಾರದನು ಸಂತೋಷದೊಡನೆ ಪ್ರವೇಶಿಸುವನು.)

ರಾಗ - ತಾಳ.

ಆಹ ! ಭಳಿರೆ । ಭಳಿರೆ । ಯೆನ್ನ । ಸಾಹಸವಿದು । ಜಗಕೆ । ಘನ ।
ಮೋಹನೆಯೊಳು । ಫಲಿಸಿತೆನ್ನ । ಮೋಹವಿದೀಗ ॥
ಕಮಲವದನೆಯಾ । ವಿಮಲರದನೆಯಾ ।
ಪ್ರಮೋ । ದದಲಿ ವರಿಸುತ । ವಿನೋ । ದದಲಿ ಸುಖಿಪೆನಾ।ನೀಗ॥೧॥
ದಂಡಕಮಂ । ಡಲುವ ಪಿಡಿದು । ಕಂಡೆಡೆಯಲಿ । ತಿರುಗಿ ದುಡಿದು ।
ದಂಡಿಸಿ ನಿಜ । ದೇಹವಿದನು । ಫಲವದೇನು ।
ಸುದತಿಮಣಿಯನು । ಮದುವೆಯಾಗಿ ನಾಂ ।
ಸದಾ । ವಿಷಯಸುಖದಲಿ । ಮುದಂ । ದಳೆದು ನಲಿವೆನಾ।ನೀಗ ॥೨॥

ಆಹಾ ! ಕಾಲೋಚಿತವಾದ ಬುದ್ಧಿಬಲವಿದ್ದರೆ, ಮನುಷ್ಯನು ಎಂತಹ ವಿಘ್ನಗಳನ್ನಾದರೂ ತಪ್ಪಿಸಬಹುದು. ಎಷ್ಟೇ ದುಷ್ಕ ! ರ ಕಾರ್ಯವನ್ನಾದರೂ ಸಾಧಿಸಬಹುದು. ಈಗ ನಾನು ಮಾಡಿದ ಯುಕ್ತಿಯಲ್ಲವೇ ಯುಕ್ತಿ ! ಇನ್ನುಮೇಲೆ ಆ ರಾಜಕುಮಾರಿಯು ನನ್ನನ್ನು ವರಿಸದೆ ಬೇರೆ ವಿಧಿಯಿಲ್ಲ ! ಈಗನಾನು ಮಾಡಿ ಬಂದಿರುವ ತಂತ್ರದಿಂದ ಸ್ವಕಾರ್ಯಸಾಧನೆಯೊಂದೇ ಅಲ್ಲದೆ, ನನ್ನಮೇಲೆ ಸ್ಪರ್ಧೆಗೆ ನಿಂತ ಆ ಪರ್ವತನಿಗೆ ತಕ್ಕ ಪ್ರತೀಕಾರವನ್ನೂ ಮಾಡಿದಂತಾಯಿತು ! ಈ ಸಂದರ್ಭದಲ್ಲಿ ಅವನಿಗೆ ಆ ಶಾಭಂಗವೊಂದು ಅವಮಾನವೊಂದು! ಇವೆರಡೂ ಏಕಕಾಲದಲ್ಲಿ ಸಂಭವಿಸುವಂತಾ

ಯಿತಲ್ಲವೆ?ಅಯ್ಯೋ ಪಾಪ!ಆ ಪರ್ವತನು ಕಪಿಮುಖದಿಂದ-ಬಂದು ಆ ಸ್ವಯಂವರಮಂಟಪದಲ್ಲಿ ಕುಳಿತಾಗ, ಅವನ ಅವಸ್ಥೆಯೇ ನಾಗಬೇಕು ? ರಾಜಕುಮಾರಿಯು ಅವನ ಮುಖವನ್ನು ನೋಡಿದ ಮಾತ್ರಕ್ಕೆ ಎಷ್ಟು ಅಸಹ್ಯಪಡುವಳು! ಅವನನ್ನು ಕಂಡೊಡನೆ ರಾಜದೂತರನ್ನು ಕರೆಸಿ, ಹೊರಕ್ಕೆ ನೂಕಿಸುದರಲ್ಲಿಯೂ ಸಂದೇಹವಿಲ್ಲ. ಅಬ್ಬಾ ! ಈ ಸಂದರ್ಭದಲ್ಲಿ ಪರ್ವತನಿಗುಂಟಾಗಬಹುದಾದ ಅವಮಾನವೆಷ್ಟೆಂಬುದನ್ನು ಯೋಚಿಸಿದರೆ, ನನಗೇ ನಾಚಿಕೆಯಾಗುತ್ತಿರುವುದು. ಛೀ ! ಛೀ ! ನನಗೆಮಾತ್ರ ಈ ವಿಧವಾದ ಅವಮಾನವೇನಾದರೂ ಸಂಭವಿಸುವಹಾಗಿದ್ದರೆ, ಆಗಲೇ ನಾನು ಪ್ರಾಣತ್ಯಾಗವನ್ನು ಮಾಡುತಿದ್ದೆನೇ ಹೊರತು, ಈ ಭೂಮಿಯಲ್ಲಿ ತಲೆಯೆತ್ತಿ ಜೀವಿಸುತ್ತಿರಲಿಲ್ಲ ! ಆದರೆ ಮಾಡುವುದೇನು ? ಆ ಪರ್ವತನಿಗೆ ಇಂತಹ ಅವಮಾನವನ್ನನುಭವಿಸಬೇಕಾಗಿದ್ದುದರಿಂದಲೇ, ಅವನಿಗೆ ನನ್ನೊಡನೆ ಸ್ಪರ್ಧೆಗೆ ನಿಲ್ಲುವಹಾಗೆ ವಿಪರೀತಬುದ್ಧಿಯೂ ಹುಟ್ಟಿತು ! ಸ್ತ್ರೀಮೋಹದಿಂದ ಮುಂದುಗಾಣದೆ ಪ್ರವರ್ತಿಸತಕ್ಕವರ ಬಾಳೇ ಇದು! (ಸುತ್ತಲೂ ನೋಡಿ) ಇದೇನು ? ರಾಜನು ಸ್ವಯಂವರಕ್ಕಾಗಿ ನಿರ್ಣಯಿಸಿದ್ದ ಕಾಲವು ಆಗಲೇ ಸಮೀಪಿಸುತ್ತಬಂದಿತು. ಇನ್ನೂ ಪರ್ವತನೇಕೆ ಬರಲಿಲ್ಲ ! ಒಂದುವೇಳೆ ಅವನು ಆ ರಾಜಕುಮಾರಿಗೆ ಮನಸ್ಸೊಪ್ಪುವಹಾಗೆ ದೇಹವನ್ನು ಶೃಂಗರಿಸಿಕೊಳ್ಳುವ ಪ್ರಯತ್ನದಲ್ಲಿ ಹೀಗೆ ವಿಳಂಬಮಾಡುತ್ತಿರಬಹುದೆ? (ನಕ್ಕು) ಕಪಿಮುಖಕ್ಕೆ ಎಷ್ಟಲಂಕಾರವನ್ನು ಮಾಡಿದರೇನು ? ಮನಸ್ತೃಪ್ತಿಯಾಗುವವರೆಗೂ ಮಾಡಲಿ ! ಪಾಪ! ಅವನು ಇಲ್ಲಿಗೆ ಬರುವಾಗ ಮನಸ್ಸಿನಲ್ಲಿ ಎಷ್ಟೋ ಆಶೋತ್ತರದಿಂದ ಬರುವನು. ತನಗಾಗುವ ಅವಮಾನವನ್ನು ಬಲ್ಲನೆ? ಇರಲಿ ! ಅವನು ಬರವಷ್ಟರಲ್ಲಿ ನಾನೂ ಈ ಸಭಾಮಂಟಪವನ್ನು ಸುತ್ತಿಬರುವೆನು.

(ಹೋಗುವನು)

(ಕಪಿಮುಖವುಳ್ಳ ಪರ್ವತನು ಸಂತೋಷದಿಂದ ನಗುತ್ತ ಪ್ರವೇಶಿಸಿ).

ರಾಗ ತಾಳ

ಮಝು| ಭಲಾ । ನಾನೀಗಲೆ । ಜಯಿಸಿದೆನು|| ಭಲ್ | ಭಲಾ | ನಾನೀಗಲೇ ।
ಜಯಿಸಿದೆನು ನಾಂ । ಜಯಿಸಿದೆನೀಗ । ಭಲಾ | ನಾನೀಗಲೆ । ಜಯಿಸಿದೆನು ||
ಭೋಗವ ತೊರೆದು । ಮೂಗನು ಹಿಡಿದು ।
ಯೋಗದೊಳಿದ್ದಿನ್ನೇನು ಫಲ ! ಭಲ್ । ಭಲಾ|| ಮಝು | ಭಲಾ || ೧ ||
ದಂಡಕಮಂಡಲು । ವೆಲ್ಲವ ಬಿಸುಟು ।
ಪುಂಡರೀಕಾಕ್ಷಿಯ । ವರಿಸುವೆನು । ಭಲ್ । ಭಲಾ ಮಝುಭಲಾ||೨||

ಲೋಕದಲ್ಲಿ ಪುರುಷನು ಎಷ್ಟು ಸಾಹಸವನ್ನು ಮಾಡಿದರೇನು? ದೈವವು ಅನುಕೂಲವಾಗಿದ್ದ ಹೊರತು ಕಾರ್ಯಸಾಧನೆಯಾಗಲಾರದೆಂಬುದು ನಿಜವೇ! ಪಾಪ ! ನಾರದನು ನನಗೂ ತಿಳಿಯದಂತೆ ರಾಜನಲ್ಲಿಗೆ ಹೋಗಿ,ಅವನ ಮಗಳನ್ನು ವಿವಾಹಮಾಡಿಕೊಳ್ಳುವುದಕ್ಕೆ ಪ್ರಯತ್ನಿಸಿದನು. ಆದರೇನು ! ದೈವವು ನನಗೆ ಅನುಕೂಲವಾಗಿದ್ದುದರಿಂದ, ಅವನ ಪ್ರಯತ್ನಕ್ಕೆ ಭಂಗವುಂಟಾದುದಲ್ಲದೆ, ಮುಂದೆ ಇದರಿಂದ ದೊಡ್ಡ ಅವಮಾನವೂ ಸಂಭವಿಸುವಂತಾಯಿತು. ದೈವಾನುಕೂಲ್ಯದಿಂದ ನನ್ನ ಬುದ್ಧಿಯು ಸಮಯೋಚಿತವಾಗಿ ಪ್ರವರ್ತಿಸಿದುದಲ್ಲದೆ, ನನ್ನ ಪ್ರಯತ್ನವೆಲ್ಲವೂ ಹೂಸರವನ್ನೆತ್ತಿದಂತೆ ನಿರಾಯಾಸವಾಗಿ ಕೈಗೂಡುತ್ತ ಬಂದಿತು. ಈಗನಾರದನು ತನಗುಂಟಾಗಿರುವ ವಿಕೃತಾಕಾರವನ್ನು ತಿಳಿಯದೆ,ಎಷ್ಟೋ ಆಶೋತ್ತರವನ್ನಿಟ್ಟುಕೊಂಡು ಇಲ್ಲಿಗೆ ಬರುವನು. ವಾಸ್ತವದಲ್ಲಿ ಮುಂದೆ ಅವನ ಪರಿಣಾಮವೇನೆಂದು ಯೋಚಿಸಿದರೆ, ನನಗೇ ಪರಿತಾಪವಾಗುವುದು. ಆದರೇನು ? ಸ್ತ್ರೀಮೋಹವಿಷಯದಲ್ಲಿ ಆ ದಯಾದಾಕ್ಷಿಣ್ಯಗಳೊಂದನ್ನೂ ನೋಡುವುದಕ್ಕೆ ಸಾಧ್ಯವಿಲ್ಲ. ಇದೇನು ? ನಾರದನು ಇನ್ನೂ ಬಾರದಿರಲು ಕಾರಣವೇನು ? (ಅತ್ತಿತ್ತ ತೆರೆಯಕಡೆಗೆ ನೋಡಿ ಕೈತಟ್ಟಿ ನಗುತ್ತ) ಅದೋ ! ಆ ಸುಂದರಮೂರ್ತಿಯು ಈಗಲೇ ಬರುತ್ತಿರುವನು! ಆ ಕಪಿಮುಖ

ಜವನಿಗಂತೂ ಹೆಣ್ಣಿನಾಸೆಯಿಲ್ಲ. ಅವನ ಆಶೋತ್ತರವೇನೋ ಅಪರಿಮಿತವಾಗಿರುವುದು ! ಬರೀಮಾತುಗಳಿಂದಾದರೂ ಅವನ ಮನಸ್ಸಿಗೆ ಆಪ್ಯಾಯನವನ್ನುಂಟುಮಾಡುವೆನು. ಹೇಗೂ ಕಾರ್ಯ ವು ನಮ್ಮ ಕೈವಶವಾಗಿರುವಾಗ, ಬಾಯಿಮಾತುಗಳಿಂದಾದರೂ ಅವನು ಸಂತೋಷಪಡಲಿ ! (ಮುಂದೆ ಹೋಗಿ) ಮಿತ್ರನೆ! ಇದೇ ನು ಇಷ್ಟುವಿಳಂಬವಾಯಿತು ? ನಾನು ನಿನ್ನನ್ನೇ ನಿರೀಕ್ಷಿಸುತ್ತಿ ದ್ದೆನು. (ನಾರದನು ಪ್ರವೇಶಿಸುವನು. ನಾರದ ಪರ್ವತರಿಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿ ಮರೆಯಾಗಿ ನಗುವರು.)

ನಾರದಂ—ಮಿತ್ರನೆ ! ನಿನಗೆ ಮೊದಲೇ ನಾನು ಇಲ್ಲಿ ಬಂದು ಹೋದೆನು. ಈ ಸ್ವಯಂವರಮಂಟಪದ ಸೊಬಗನ್ನು ನೋಡುವುದಕ್ಕಾಗಿ ಹೋಗಿ ಅಲ್ಲಲ್ಲಿ ಸುತ್ತಿಬಂದೆನು.

ಪರ್ವತಂ—ಅದು ಹೋಗಲಿ ! ಈಗ ಅಂಬರೀಷರಾಜನು ಏನೇನೋ ಉಪಾಯ ದಿಂದ ತನ್ನ ಮಗಳ ಸ್ವಯಂವರವೆಂಬ ವ್ಯಾಜವನ್ನು ಕಲ್ಪಿಸಿ, ಆಜನ್ಮಸ್ನೇಹಿತರಾದ ನಮ್ಮಿಬ್ಬರನ್ನೇ ಸ್ಪರ್ಧೆಗೆ ನಿಲ್ಲಿಸಿದನು ನೋಡು !

ನಾರದಂ—ಇದು ನಮ್ಮಿಬ್ಬರ ಅದೃಷ್ಟಪರೀಕ್ಷೆಯೇ ಹೊರತು ಇದರಲ್ಲಿ ಸ್ಪರ್ಧೆಯೇನಿರುವುದು. ಈಗ ನಮ್ಮಿಬ್ಬರಲ್ಲಿ ಯಾರ ಅದೃಷ್ಟವು ಮೇಲೆಂಬುದು ಇನ್ನು ಸ್ವಲ್ಪಕಾಲದೊಳಗಾಗಿ ತಿಳಿದುಹೋಗು ವುದು.

ಪರ್ವತಂ—(ಸ್ವಗತಂ) ಇನ್ನೂ ಇವನಿಗೆ ಆ ಆಸೆಯು ತಪ್ಪಿದಹಾಗಿಲ್ಲ! ಪಾಪ ! ತನ್ನಮುಖವು ತನಗೆ ಕಾಣುವಹಾಗಿದ್ದರೆ, ಇವನು ಹೀಗೆ ಆಶೋತ್ತರವನ್ನಿಟ್ಟುಕೊಳ್ಳುತ್ತಿದ್ದನೆ ? ( ಪ್ರಕಾ ಶಂ) ನಾರದಾ ! ನನಗಿಂತಲೂ ನೀನು ಅದೃಷ್ಟಶಾಲಿಯೆಂ ಬುದು, ಈಗ ನಿನ್ನ ಮುಖಲಕ್ಷಣದಿಂದಲೇ ವ್ಯಕ್ತವಾಗುವುದು. ಲೋಕಮೋಹಕವಾದ ಈ ನಿನ್ನ ಮುಖಸೌಂದರ್ಯವನ್ನು ನೋ

ಡಿದಕೂಡಲೆ, ಆ ರಾಜಕನ್ಯೆಯು ನಿನ್ನನ್ನು ವರಿಸುವುದರಲ್ಲಿ ಸಂದೇಹವಿಲ್ಲ! ಇದು ಅಸೂಯೆಯ ಮಾತೆಂದು ತಿಳಿಯಬೇಡ ! ನಿಜವಾಗಿ ಹೇಳುವೆನು.

ನಾರದಂ—( ನಗುತ್ತ ಸ್ವಗತಂ ). ಮನುಷ್ಯರು ಮನಸ್ಸಿನಲ್ಲಿದ್ದುದನ್ನೇ ಬಾಯಿಂದಾಡುವರೆಂಬುದು ನಿಜ ! ಇವನು ಅಸೂಯೆಯಿಂದಲೇ ಈ ಮಾತನ್ನಾಡುವಹಾಗಿದೆ. ಇರಲಿ! ( ಪ್ರಕಾಶಂ ) ನನ್ನಲ್ಲಿರುವ ಮಿತ್ರಸ್ನೇಹದಿಂದ ನಿನಗೆ ಹಾಗೆ ತೋರುವುದೇನೋ ಸಹಜವಾಗಿದ್ದರೂ, ನಿನ್ನ ಮುಂದೆ ನಾನಲ್ಲ ! ಈಗ ನಿನ್ನ ಮುಖವು ಎಂತವವರ ದೃಷ್ಟಿಯನ್ನಾದರೂ ಆಕರ್ಷಿಸುವಂತಿರುವುದು.

(ತೆರೆಯಲ್ಲಿ) ರಾಜಾಧಿರಾಜ ! ಪರಾಕ್ ಎಚ್ಚರಿಕೆ !

ನಾರದಂ—ಓಹೋ ! ರಾಜನು ಬರುತ್ತಿರುವಹಾಗಿದೆ.

(ಇಬ್ಬರೂ ಠೀವಿಯಿಂದ ಪೀಠದಮೇಲೆ ಕುಳ್ಳಿರುವರು.)

(ರಾಜನು ಪುಷ್ಪಮಾಲಿಕೆಯನ್ನು ಹಿಡಿದು ಶ್ರೀಮತಿಯನ್ನು ಕರೆತರುವನು.)

ರಾಜಂ—(ಮಗಳನ್ನು ಕೈಹಿಡಿದು ನಿಲ್ಲಿಸಿಕೊಂಡು) ಕುಮಾರೀ ! ನಾವು ಕ್ಷತ್ರಿಯಕುಲದವರಾಗಿದ್ದರೂ, ನೀನು ಬ್ರಾಹ್ಮಣಪತ್ನಿಯೆನಿಸಿಕೊಂಡು, ಉತ್ತಮವಾದ ಬ್ರಾಹ್ಮಣಕುಲವನ್ನು ಸೇರತಕ್ಕ ಭಾಗ್ಯಕ್ಕೆ ಪಾತ್ರಳಾಗಿರುವೆ! ಮಹಾಜ್ಞಾನನಿಧಿಗಳೆನಿಸಿಕೊಂಡ ನಾರದಪರ್ವತರೆಂಬ ಮಹರ್ಷಿಗಳಿಬ್ಬರೂ ನಿನ್ನ ರೂಪಕ್ಕೆ ಮೋಹಿತರಾಗಿ,ನಿನ್ನನ್ನು ವರಿಸಬೇಕೆಂದಪೇಕ್ಷಿಸಿರುವರು. ಇಬ್ಬರೂ ಮಹಾತ್ಮರಾದುದರಿಂದ,ಅವರಲ್ಲಿ ಯಾರನ್ನೂ ತಿರಸ್ಕರಿಸಲಾರದೆ, ನಾನು ಅವರಿಬ್ಬರಿಗಾಗಿಯೇ ಈ ಸ್ವಯಂವರವನ್ನೇರ್ಪಡಿಸಿರುವೆನು. ಆದುದರಿಂದ :—

ಕಾಂಭೋಜಿ ರಾಗ. ರೂಪಕ ತಾಳ.

**ಕೇಳು ಕೇಳಲೆ । ಬಾಲಿಕಾಮಣಿ । ಕೇಳು ಗುಣಮಣಿ॥**
**ನೀಲನೀರದ । ವೇಣಿ ಪಂಕಜ। ಪಾಣೀ । ಕೋಮಲ । ವಾಣಿ।ರಮಣಿ।**
**ಮೌನಿಗ।ಳೀರ್ವ್ವರು।ಮಾನಿತಶೀಲರು।ನಿನ್ನನು। ಮೋಹಿಸಿ।ಬಂದಿಹರು ।**
**ಮಾನಿನೀಮಣಿ । ಯಿವರೊಳೊರ್ವನ । ನಾನು। ರಾಗ।ದಿಂದ।ವರಿಸು॥**
**ಮುನ್ನ ಚ್ಯವನ । ಮುನಿಯನೊಲಿದ । ಕನ್ಯೆ ಸುಕ।ನ್ಯೆಯತೆರದಿ ।**
**ಸನ್ನುತಾಂಗಿ । ಸಕಲಭಾಗ್ಯಸಂ । ಪನ್ನೆ । ಯಾಗಿ ।ಬಾಳು।ನೀನು ॥**

ಕುಮಾರೀ ! ಇದೋ ! ಈ ಪುಷ್ಪಮಾಲಿಕೆಯನ್ನು ಕೈಗೆ ತೆಗೆದು ಕೊಂಡು, ಆ ಇಬ್ಬರುಮುನಿಕುಮಾರರಲ್ಲಿ, ಯಾರ ಸೌಂದರ್ಯವು ನಿನ್ನ ಮನಸ್ಸಿಗೊಪ್ಪುವುದೋ, ಅವರ ಕೊರಲಿಗೆ ಈ ಮಾಲೆ ಯನ್ನಿಕ್ಕು ! ಇಬ್ಬರೂ ಸಮಾನಮಹಿಮೆಯುಳ್ಳವರು ! ಇಬ್ಬ ರೂ ಪರಮಭಾಗವತೋತ್ತಮರು.

ಶ್ರೀಮತಿ—ಜನಕಾ ! ನಿನ್ನ ಆಜ್ಞಾಧೀನಳಾಗಿ ನಡೆಯುವುದಕ್ಕೆ ಸಿದ್ಧಳಾಗಿ ರುವೆನು. ಮಕ್ಕಳಿಗೆ ತಂದೆತಾಯಿಗಳ ಮಾತನ್ನು ನಡೆಸುವುದ ಕ್ಕಿಂತಲೂ ಉತ್ತಮಧರ್ಮವಾವುದುಂಟು? ಯುಕ್ತಾಯುಕ್ತ ವಿವೇಚನಪರನಾದ ನೀನು, ನನ್ನ ಕ್ಷೇಮಚಿಂತೆಯಿಂದ ನಿರ್ಣಯಿ ಸಿದ ಕಾರ್ಯಕ್ಕೆ ನಾನು ಹಿಂತೆಗೆಯುವೆನೆ ? ಇದರಮೇಲೆ ಹರಿಭ ಕ್ತೋತ್ತಮನಾದ ನಿನ್ನ ಗರ್ಭದಲ್ಲಿ ಜನಿಸಿದ ನನಗೆ, ಅಂತಹಪರ ಮಭಾಗವತೋತ್ತಮರ ಪಾದಾಶ್ರಯವು ಲಭಿಸುವುದಾದರೆ ಇ ದು ನನ್ನ ಭಾಗ್ಯವಿಶೇಷವಲ್ಲವೇ ? ಎಲ್ಲಿ ಮಾಲೆಯನ್ನು ಕೊಡು? (ಎಂದು ಮಾಲೆಯನ್ನು ಹಿಡಿದು ಮುಂದೆ ಹೋಗಿ ನಾರದಪ ರ್ವತರನ್ನು ನೋಡಿ ಭಯದಿಂದ ತಟ್ಟನೆ ಹಿಂತಿರುಗಿ.)

ಶ್ರೀಮತಿ—ಜನಕಾ ! ರಕ್ಷಿಸು ! ರಕ್ಷಿಸು ! (ಎಂದು ತಂದೆಯ ಮರೆಯಲ್ಲಿ ನಿಲ್ಲುವಳು.)

ರಾಜಂ—(ಸಂಭ್ರಾಂತನಾಗಿ) ಕುಮಾರೀ ! ಏನಿದು ? ಅಕಸ್ಮಾತ್ತಾಗಿ ಹೀಗೇಕೆ ಹೆದರುವೆ ?

ಶ್ರೀಮತಿ—ಜನಕಾ ! ಅದೋ ! ನಮ್ಮ ಸ್ವಯಂವರಮಂಟಪದಲ್ಲಿ ಯಾವುದೋ ಭಯಂಕರವಾದ ಕಾಡುಮೃಗಗಳು ಬಂದು ಕುಳಿತಿರುವುವು.

ರಾಜಂ—ಎಲ್ಲಿ ! ಎಲ್ಲಿ !

ಶ್ರೀಮತಿ—(ರಾಜನನ್ನು ಕರೆತಂದು ತೋರಿಸುವಳು.)

ರಾಜಂ—(ಮುಂದೆ ನೋಡಿ ಚಿಂತಾಕುಲನಾಗಿ)ಆಹಾ! ಏನಿದು ! ಈ ಮೃಗಗಳೆಲ್ಲಿಯವು ? (ಚೆನ್ನಾಗಿ ನೋಡಿ)ಇವು ನಿಜವಾಗಿ ಸಾಮಾನ್ಯ ಮೃಗಗಳಂತೆ ತೋರಲಿಲ್ಲ ! ಮುಖವುಹೊರತು, ಕೈ, ಕಾಲು, ಮುಂತಾದ ಅವಯವಗಳೆಲ್ಲವೂ ಮನುಷ್ಯಾಕೃತಿಯಿಂದಿರುವುವು. ಈ ಸ್ವಯಂವರವನ್ನು ಕೆಡಿಸುವುದಕ್ಕಾಗಿ, ಮಾಯಾವಿಗಳಾದ ರಾಕ್ಷಸರೇನಾದರೂ ಹೀಗೆ ವೇಷಧಾರಿಗಳಾಗಿ ಬಂದಿರಬಹುದೆ ? ಅದಕ್ಕೂ ಸಂಭವವಿಲ್ಲ ! ಸಾಕ್ಷಾದ್ವಿಷ್ಣುಚಕ್ರವು ನನ್ನಲ್ಲಿರುವಾಗ, ರಾಕ್ಷಸರು ಇಷ್ಟುನಿರ್ಭಯವಾಗಿ ಇಲ್ಲಿಗೆ ಪ್ರವೇಶಿಸುವುದೆಂದರೇನು ? ನಮ್ಮ ಪುರದ್ವಾರಕ್ಕೆ ಕಾಲಿಡುವುದಕ್ಕೆ ಮೊದಲೇ ಆ ಸುದರ್ಶನದ ತೇಜಸ್ಸಿನಿಂದ ಅವರು ದಗ್ಧರಾಗಬೇಕಲ್ಲವೆ? ಅಥವಾ ಇದು ದೇವತೆಗಳ ತಂತ್ರವಾಗಿರಬಹುದೆ ? ಯಾವದೇವತೆಗಳಲ್ಲಿಯೂ ನಾನು ಅಪರಾಧಿಯಲ್ಲ ! ಅವರೇಕೆ ನನ್ನನ್ನು ವಂಚಿಸುವರು ! ಒಂದುವೇಳೆ ನಾರದಪರ್ವತರೇ ನನ್ನನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ವೇಷಾಂತರದಿಂದ ಬಂದಿರಬಹುದೆ ? ಇದ್ದರೂ ಇರಬಹುದು. ಇರಲಿ ! ಇವರನ್ನು ಮಾತಾಡಿಸಿ ನೋಡುವೆನು ಅವರ ಕಂಠಧ್ವನಿಯಿಂದ ಸ್ವಲ್ಪಮಾತ್ರವಾದರೂ ನಿಜಸ್ಥಿತಿಯನ್ನು ಕಂಡುಕೊಳ್ಳಬಹುದು. (ಮುಂದೆ ಬಂದು) ಎಲೈ! ವಿಲಕ್ಷಣರೂಪದಿಂದ ಭದ್ರಾಸನವನ್ನೇರಿ ಕುಳಿತಿರುವ ನೀವು ಯಾರು !

ನಾರದಂ—(ಸ್ವಗತಂ)ಓಹೋ!ರಾಜನು ಈ ಕಪಿಮುಖವನ್ನು ನೋಡಿ ಭ್ರಮಿಸುತ್ತಿರುವನು.ನಿಜಸ್ಥಿತಿಯನ್ನು ತಿಳಿಯದವರು ಹೀಗೆ ಕಳವಳಿ

ಸುವುದು ಯುಕ್ತವೆ! ಅಯ್ಯೋಪಾಪ! ನಾನು ಮಾಡಿರುವ ತಂತ್ರವನ್ನು ಅವನೇನುಬಲ್ಲನು? ಇರಲಿ ! ಮುಖ್ಯವಾಗಿ ರಾಜನು ಪರ್ವತನ ವಿಷಯದಲ್ಲಿ ಸಂದೇಹಿಸುತ್ತಿರುವನು. ಅವನ ಸಂದೇಹವನ್ನು ನೀಗಿಸುವೆನು (ಪ್ರಕಾಶಂ) ರಾಜೇಂದ್ರಾ ! ಸಂದೇಹಿಸಬೇಡ ! ಇವನು ನನ್ನ ಮಿತ್ರನಾದ ಪರ್ವತನು! ನಾನು ನಾರದನೆಂಬುದನ್ನು ನೀನೇ ಬಲ್ಲೆಯಷ್ಟೆ ?

ಪರ್ವತಂ—(ಸ್ವಗತಂ) ಅಯ್ಯೋ! ಈ ನಾರದನು ತನ್ನ ವಿಷಯದಲ್ಲಿ ರಾಜನಿಗಿರುವ ಸಂದೇಹವನ್ನು ತಿಳಿಯದೆ ನನ್ನನ್ನು ಅವನಿಗೆ ತೋರಿಸುತ್ತಿರುವನು. ನನ್ನಮುಖವನ್ನು ನೋಡಿದರೆ ನಾನು ಪರ್ವತನೆಂಬುದು ತಿಳಿಯುವುದಿಲ್ಲವೆ ? ಈತನವಿಷಯದಲ್ಲಿ ರಾಜನಿಗಿರುವ ಸಂದೇಹವನ್ನು ಪರಿಹರಿಸುವೆನು. (ಪ್ರಕಾಶಂ) ಮಹಾರಾಜನೆ! ಸಂದೇಹಿಸಬೇಡ ! ನನ್ನನ್ನುಬಲ್ಲೆಯಷ್ಟೆ ? ಇವನೇ ನಾರದನು. ನೆನ್ನೆ ನೀನು ವಾಗ್ದಾನಮಾಡಿದುದಕ್ಕಾಗಿ ನಾವಿಬ್ಬರೂ ನಿನ್ನ ಮಗಳ ಸ್ವಯಂವರಕ್ಕಾಗಿ ಬಂದಿರುವೆವು.

ರಾಜಂ —(ಆಶ್ಚರ್ಯದಿಂದ)ಏನು ! ಇವರೇ ನಾರದಪರ್ವತರೆ! ಹಾಗೆ ತೋರಲಿಲ್ಲ ! ಆ ಬ್ರಹ್ಮತೇಜಸ್ಸೆಲ್ಲಿ ! ಈ ಘೋರರೂಪವೆಲ್ಲಿ ! ಆದರೆ ಕಂಠಸ್ವರವುಮಾತ್ರ ಮೊದಲಿನಂತೆಯೇ ಇರುವುದು ! ಆನಾರದಪರ್ವತರೇ ಈ ವೇಷದಿಂದ ನನ್ನನ್ನು ಪರೀಕ್ಷಿಸುವುದಕ್ಕಾಗಿ ಬಂದಿರಬಹುದೆ ! ಇದ್ದರೂ ಇರಬಹುದು. ಮಹರ್ಷಿಗಳ ಪ್ರಭಾವವನ್ನು ಹೀಗೆಂದು ಹೇಳುವುದಕ್ಕಿಲ್ಲ ! ಈಗೇನು ಮಾಡಲಿ.

ನಾರದಂ—ರಾಜೇಂದ್ರಾ ! ಏಕೆ ಸುಮ್ಮನೆ ನಿಂತಿರುವೆ ?

ಪರ್ವತಂ—ರಾಜಾ ! ನಿನ್ನ ಸಂದೇಹಕಾರಣವೇನು ? ಅದನ್ನಾದರೂ ಹೇಳಬಾರದೆ ?

ರಾಜಂ —(ಸ್ವಗತಂ) ಆಹಾ ! !ಇವನಾದರೋ ಆತುರಪಡಿಸುತ್ತಿರುವರು. ಇವರಿಗೆ ನನ್ನ ಸಂದೇಹಕಾರಣವನ್ನು ಹೇಗೆ ತಿಳಿಸಲಿ ! ಲೋಕದಲ್ಲಿ ಅವರವರಲ್ಲಿರುವ ನಿಜವಾದ ದೋಷವನ್ನೆತ್ತಿಹೇಳಿದರೆ,

ಎಂತವರಿಗಾದರೂ ಕೋಪವುಂಟಾಗುವುದು. ಕುರೂಪಿಗಳನ್ನು ನೋಡಿ ಅವರಮುಂದೆ ಕುರೂಪಿಗಳೆಂದು ಹೇಳಿದರೆ, ಅವರಿಗೆ ಕೋಪವುಂಟಾಗುವುದು ಸಹಜವು. ಇವರೇ ವೇಷಧಾರಿಗಳಾದ ನಾರದಪರ್ವತರಾಗಿದ್ದಪಕ್ಷದಲ್ಲಿ, ಅವರ ದೋಷವನ್ನೆತ್ತಿಹೇಳುವುದರಿಂದ, ಅವರ ಕೋಪಕ್ಕೆ ಗುರಿಯಾಗುವೆನು. ಇದಲ್ಲದೆ ನಾನು ನಿರ್ಣಯಿಸಿದ್ದ ಸ್ವಯಂವರಕಾಲವು ಅತಿಕ್ರಮಿಸುತ್ತ ಬಂದಿರುವುದು. ಇದುವರೆಗೂ ಆ ಮಹರ್ಷಿಗಳು ಬಾರದಿರುವರೆ ? ಇವರೇ ನಾರದಪರ್ವತರಾಗಿರಬೇಕು! ನನ್ನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ವೇಷಾಂತರದಿಂದ ಬಂದಿರುವರು. ಹಾಗಿದ್ದರೂ, ನಾನು ನನ್ನ ಮುದ್ದುಮಗಳನ್ನು ಕರೆದು, ಈ ಕುರೂಪಿಗಳ ಕೊರಲಿಗೆ ಮಾಲೆಯನ್ನು ಹಾಕುವಂತೆ ಹೇಗೆ ನಿರ್ಬಂಧಿಸಲಿ !

ನಾರದಂ—(ಕೋಪದಿಂದ ನೆಲವನ್ನೊದೆಯುತ್ತ) ಅಂಬರೀಷಾ ! ಇದಕ್ಕಾಗಿಯೇ ನಮ್ಮನ್ನು ಕರೆಸಿದೆಯೋನು ?

ಪರ್ವತಂ—ರಾಜಾ ! ನೀನು ನಮ್ಮನ್ನವಮಾನಪಡಿಸುವುದಕ್ಕಾಗಿ ಈ ಉಪಾಯವನ್ನೆತ್ತಿರುವಂತಿದೆ! ಹಿಂದೆ ನೀನು ಕೊಟ್ಟ ಮಾತಿನಂತೆ,ನಿನ್ನ ಮಗಳನ್ನು ಕರೆದು ಮುಂದಿನ ಕಾರ್ಯವನ್ನು ನಡೆಸುವುದಾದರೆ ನಡೆಸು ! ಇಲ್ಲದಿದ್ದರೆ ಇದೋ! ನಾನು ಹೊರಡುವೆನು. (ಕೋಪದಿಂದ ಹಿಂತಿರುಗುವನು.)

ರಾಜಂ— (ಭಯದಿಂದ ಮುಂದೆ ಬಂದು ತಡೆದು ನಿಲ್ಲಿಸಿ) ಪೂಜ್ಯರೆ !ಆಡಿದ ಮಾತಿಗೆ ನಾನು ಎಂದಿಗೂ ತಪ್ಪುವವನಲ್ಲ. ಆದರೆ ನಿಮ್ಮಿಬ್ಬರ ಮುಖಲಕ್ಷಣವೂ ಮೊದಲಿನಂತಿಲ್ಲದೆ ಈಗ ಬೇರೆವಿಧವಾಗಿರುವುದರಿಂದ, ನಾನು ಸಂದೇಹಿಸುತ್ತಿದ್ದೆನು. ಬೇರೆ ಯಾರಾದರೂ ಮಾಯಾವಿಗಳು ನನ್ನ ಮಗಳಮೇಲೆ ಕಣ್ಣಿಟ್ಟು,ನನ್ನನ್ನು ವಂಚಿಸುವುದಕ್ಕಾಗಿ ಹೀಗೆ ಬಂದಿದ್ದರೆ, ಆಗ ನಾನು ನಾರದಪರ್ವತರಿಗೆಮಾಡಿದ ವಾಗ್ದಾನವು ಸುಳ್ಳಾಗುವುದಲ್ಲವೆ? ಆ ಪ್ರತಿಜ್ಞಾಭಂಗದೋಷಕ್ಕಾಗಿಯೇ ನಾನು ಹೆದರುತ್ತಿರುವೆನು.

ನಾರದಂ—ಏನು ! ನಾನು ನಾರದನೆಂಬುದರಲ್ಲಿಯೇ ನಿನಗೆ ಸಂದೇಹ ವೇನು ? ಮುಖವನ್ನು ನೋಡಿದರೆ ತಿಳಿಯುವುದಿಲ್ಲವೆ ? ಈತನ ವಿಷಯದಲ್ಲಿಯೂ ನೀನು ಸಂದೇಹಿಸಬೇಡ! ಇವನೇ ಪರ್ವತನು.

ಪರ್ವತಂ—ರಾಜಾ ! ಸಂದೇಹಿಸಬೇಡ ! ಈತನೇ ನಾರದನು. ನನ್ನ ಮಾತನ್ನು ನಂಬು! ನಿನ್ನ ಮಗಳನ್ನು ಕರೆ !

ರಾಜಂ— ಪೂಜ್ಯರೆ ! ಹಾಗೆಯೇ ಮಾಡುವೆನು. (ಶ್ರೀಮತಿಯ ಕೈಯನ್ನು ಹಿಡಿದು ಮುಂದೆ ನಿಲ್ಲಿಸಿಕೊಂಡು ಜನಾಂತಿಕಂ) ಕುಮಾರೀ ! ಎಷ್ಟೆಷ್ಟು ಯೋಚಿಸಿದರೂ ಇವರ ನಿಜಸ್ಥಿತಿಯೇನೆಂದು ತಿಳಿಯಲಿಲ್ಲ. ನಾನು ನಿರ್ಣಯಿಸಿದ್ದಂತೆ ನಾರದಪರ್ವತರಿಬ್ಬರೂ, ಇಲ್ಲಿಗೆ ಬರಬೇಕಾದ ಕಾಲಕ್ಕೆ ಸರಿಯಾಗಿ, ಈ ವ್ಯಕ್ತಿಗಳೆರಡೂ ಇಲ್ಲಿಗೆ ಬಂದು ಕುಳಿತಿರುವುವು. ಕಂಠಸ್ವರವೂ ಅವರಂತೆಯೇ ಇರುವುದು. ಇದರಿಂದ ಆ ನಾರದಪರ್ವತರೇ ನಮ್ಮ ಮನೋದಾರ್ಢ್ಯವನ್ನೂ, ನಮ್ಮ ಸತ್ಯವನ್ನೂ ಪರೀಕ್ಷಿಸುವುದಕ್ಕಾಗಿ, ಹೀಗೆ ವೇಷಧಾರಿಗಳಾಗಿ ಬಂದಿರಬಹುದೆಂದು ಊಹಿಸಬೇಕಾಗಿದೆ. ನಿಜಸ್ಥಿತಿಯನ್ನು ತಿಳಿಯದೆ ನಾವು ಇವರನ್ನು ತಿರಸ್ಕರಿಸಿದ ಮೇಲೆ, ಇವರೇ ನಾರದಪರ್ವತರಾಗಿದ್ದಪಕ್ಷದಲ್ಲಿ ನಾವು ಬ್ರಾಹ್ಮಣಕೋಪಕ್ಕೆ ಪಾತ್ರರಾಗುವೆವು. ಆಡಿದ ಭಾಷೆಗೆ ತಪ್ಪಿದ ಮಹಾದೋಷಕ್ಕೂ ನಾನು ಗುರಿಯಾಗುವೆನು. ಹಾಗಿಲ್ಲದೆ ಈ ಸ್ಥಿತಿಯಲ್ಲಿ ಇವರ ಕೊರಲಿಗೆ ಸ್ವಯಂವರಮಾಲಿಕೆಯನ್ನು ಹಾಕಬೇಕೆಂದು ನಿನ್ನನ್ನು ನಿರ್ಬಂಧಿಸುವುದಕ್ಕೂ ನನ್ನ ನಾಲಗೆಯು ಹೊರಡದಿರುವುದು. ಇದಕ್ಕೆ ನಾನೇನು ಮಾಡಲಿ ! ಈ ಉಭಯ ಸಂಕಟದಿಂದ ನನ್ನನ್ನು ತಪ್ಪಿಸತಕ್ಕ ಭಾರವು ನಿನ್ನದಾಗಿದೆ.

ಶ್ರೀಮತಿ—ಜನಕಾ ! ಭಗವನ್ಮಾಯೆಯು ವಿಚಿತ್ರವಾಗಿರುವುದು. ಜನರು ಆ ಮಾಯೆಯಿಂದ ವಂಚಿತರಾಗಿ, ತಮ್ಮತಮ್ಮ ಕರ್ಮಾನುಸಾರವಾದ ಫಲವನ್ನು ಅನುಭವಿಸದೆ ತೀರದು ! ಈ ವಿಷಯದಲ್ಲಿ ಯಾರೇನು ಮಾಡಬಲ್ಲರು? ನನ್ನ ಕ್ಷೇಮವನ್ನುದ್ದೇಶಿಸಿ ನೀನು ಸತ್ಯ

ಭ್ರಷ್ಟನಾಗುವುದು ನನಗೆ ಸರ್ವಥಾ ಸಮ್ಮತವಿಲ್ಲ ! ನಿನ್ನ ಕ್ಷೇಮವೇ ನನ್ನಕ್ಷೇಮವು ! ನಿನ್ನ ಕೀರ್ತಿಯೇ ನನ್ನ ಕೀರ್ತಿ ! ಆದರೆ ಜನಕಾ ! ಆ ಎರಡುರೂಪಗಳಲ್ಲಿ ನಾನು ಮನಃಪೂರ್ವಕವಾಗಿ ಯಾವ ರೂಪವನ್ನೂ ಮೋಹಿಸುವಹಾಗಿಲ್ಲ ! ನಾನು ಕಣ್ಣುಮುಚ್ಚಿಕೊಂಡು, ಶ್ರೀಹರಿಧ್ಯಾನಪೂರ್ವಕವಾಗಿ ಈಮಾಲೆಯನ್ನು ಎಸೆದುಬಿಡುವೆನು. ಅದು ದೈವವಶದಿಂದ ಯಾರ ಕಂಠದಲ್ಲಿಬಿದ್ದರೆ ಅವನೇ ನನಗೆ ಪತಿಯಾಗಲಿ ! ಅವನು ಎಂತವನಾಗಿದ್ದರೂ ನಾನು ತ್ರಿಕರಣಶುದ್ಧಿಯಿಂದ ಅವನ ಪಾದಸೇವೆಯನ್ನು ಮಾಡುವೆನು. ಪೂರ್ವದಲ್ಲಿ ಸಾವಿತ್ರಿಗೆ ಅವಳ ಪುಣ್ಯಫಲದಿಂದ, ಅಲ್ಪಾಯುಸ್ಸುಳ್ಳ ಪತಿಯೇ ಯಮಪಾಶದಿಂದ ತಪ್ಪಿಸಿಕೊಂಡು ಚಿರಜೀವಿಯಾಗಲಿಲ್ಲವೆ ? ಅದರಂತೆಯೇ ಈಗಲೂ ನನ್ನಲ್ಲಿ ಅಲ್ಪಸ್ವಲ್ಪಪುಣ್ಯಶೇಷವೇನಾದರೂ ಇದ್ದರೆ, ಆ ಪುಣ್ಯಫಲದಿಂದ, ಈ ಮಾಲೆಯನ್ನು ಧರಿಸಿದವನೇ ಲೋಕೋತ್ತರಗುಣವುಳ್ಳ ಪತಿಯಾಗಲಿ ! ಮಾಲೆಯನ್ನು ಕೊಡು ! (ಕೈಯಲ್ಲಿ ಮಾಲೆಯನ್ನೆತ್ತಿ ಹಿಡಿದು ಭಗವಂತನನ್ನು ಸ್ತುತಿಸುವಳು.)

ರಾಗ. ಭೂಪಾಳಿ. ತಾಳ.

ಹರಿಹರಿ ಪೊರೆಯೆನ್ನ । ಪರಮಕೃಪಾಕರ । ಶರಣಾರ್ತಿಹರಣ ಶ್ರೀ।ಶೌರೇ॥
ಮುನಿಗಳೀರ್ವರುಮೆನ್ನ । ಮನವ ಪರೀಕ್ಷಿಸ । ಲನುವಗೆಯ್ದಿಹರೊ ನಾ ।
ವನಜಾಕ್ಷ ನಿನ್ನಯ । ಘನಲೀಲೆಯೋ ಇದು । ನರಿಯೆ
ದನುಜರ ಮಾಯೆಯೋ । ಎನಗಿದೆ ವಿಧಿಯೋ ಹಾ॥ ೧॥
ಪರಮಪುರುಷ ನಿನ್ನ । ಚರಣಕರ್ಪಿತವೆಂದು। ವರಣಮಾಲೆಯನಿದ।ನಿಡುವೆ॥
ಸರವಿದು ಯಾವನ । ಕೊರಲೊಳು ಬೀಳ್ವುದೊ । ವರನವನೆಂದು ನಾಂ।
ಕರಣಶುದ್ಧಿಯಿಂ ಭಜಿಪೆ ॥ ೨॥

ಓ ಪುರುಷೋತ್ತಮಾ ! ತತ್ವಜ್ಞರಾದ ಮಹರ್ಷಿಗಳು, ನೀನೇ ಸಕಲಜೀವಾತ್ಮಕನೆಂದು ಹೇಳುವುದು ನಿಜವಾಗಿದ್ದರೆ, ಈ ಪುಷ್ಪಮಾಲಿಕೆಯು ಯಾರ ಕಂಠದಲ್ಲಿ ಬೀಳುವುದೋ, ಅವನು

ನಿನ್ನಂತೆ ದಿವ್ಯಮಂಗಳವಿಗ್ರಹ ವಿಶಿಷ್ಟನಾಗಿ, ನಿನ್ನಂತೆಯೇ ಸಕಲ ಕಲ್ಯಾಣಗುಣಗಣಪರಿಪೂರ್ಣನಾಗಲಿ! ನಿನ್ನ ಅಂಶದಿಂದಲೇ ಅವನು ನನಗೆ ಪತಿಯಾಗಲಿ! ದೇವಾ! ಈ ಪುಷ್ಪಮಾಲಿಕೆಯು ನಿನಗೇ ಅರ್ಪಿತವು! (ಎಂದೆಸೆಯುವಳು.)

(ಮಾಲೆಯು ಅದೃಶ್ಯವಾಗುವುದು. ದಿವ್ಯತೇಜಸ್ವಿಯಾದ ತರುಣನೊಬ್ಬನು ಅದೇ ಮಾಲಿಕೆಯನ್ನು ಕಂಠದಲ್ಲಿ ಧರಿಸಿ ವಿಮಾನದಿಂದಿಳಿದು ಬಂದು, ಶ್ರೀಮತಿಯ ಕೈಯನ್ನು ಹಿಡಿದುಕೊಂಡು) ಎಲೆ ಭದ್ರೆ! ಇದೋ! ನೀನು ಹಾಕಿದ ಪುಷ್ಪಮಾಲೆಯು ನನ್ನ ಕಂಠದಲ್ಲಿ ಬಿದ್ದಿತು! ನೀನು ನನ್ನ ಪತ್ನಿ! ಬಾ ಹೋಗುವೆವು! (ವಿಮಾನವನ್ನೇರಿಸಿ, ಕರೆದುಕೊಂಡು ಹೋಗುವನು.) ಪುಷ್ಪವೃಷ್ಟಿಯಾಗುವುದು. (ಎಲ್ಲರೂ ಸ್ತಬ್ಧರಾಗಿ ನೋಡುತ್ತಿರುವರು.)

ರಾಜಂ — (ದುಃಖಾಶ್ಚರ್ಯದಿಂದ) ಆಹಾ! ಏನೀವಿಪರೀತವು! ಕುಮಾರೀ! ಕುಮಾರೀ! ಎಲ್ಲಿ ಹೋದೆ! (ನಾರದಪರ್ವತರಿಬ್ಬರೂ ಕೋಪದಿಂದ ರಾಜನನ್ನು ದುರದುರನೆ ನೋಡುತ್ತ ಹಲ್ಲುಕಡಿಯುತ್ತಿರುವರು.)

ನಾರದಂ—ಎಲೆ ರಾಜಾಧಮಾ! ಈ ಇಂದ್ರಜಾಲದಿಂದ ನಮ್ಮನ್ನು ವಂಚಿಸುವುದಕ್ಕಾಗಿಯೇ ಇದುವರೆಗೆ ಕಾಲಹರಣಮಾಡಿದೆಯಲ್ಲವೆ?

ಪರ್ವತಂ—ಮಿತ್ರನೆ! ಇವನು ನಮ್ಮನ್ನು ಸ್ವಯಂವರಕ್ಕೆಂದು ಕರೆಸಿ, ನಾವು ಬಂದಮೇಲೆ, ಏನೇನೋ ಯೋಚಿಸುವನೆವದಿಂದ ಕಾಲಹರಣವನ್ನು ಮಾಡಿದಾಗಲೇ ನನಗೆ ಸಂದೇಹವು ಹುಟ್ಟಿತು, ತನ್ನ ಮಗಳನ್ನು ಬೇರೆ ಯಾರೋ ಅಪಹರಿಸಿದಂತೆ ದುಃಖವನ್ನೂ ನಟಿಸುವನು ನೋಡು!

ರಾಜಂ —(ದೈನ್ಯದಿಂದ) ಪೂಜ್ಯರೆ! ಸತ್ಯವಾಗಿಯೂ ಈ ವಿಷಯದಲ್ಲಿ ನಾನು ಅಪರಾಧಿಯಲ್ಲ! ನಾನು ಯಾವ ಸಂಗತಿಯನ್ನೂ ಕಾಣೆನು.

ನಾರದಂ—ಎಲೆಲ! ನೃಪಾಧಮಾ! ಈ ತಂತ್ರಗಳೆಲ್ಲವನ್ನೂ ನಾನು ಬಲ್ಲೆ ನು. ಸಾಕು ಸುಮ್ಮನಿರು!

ರಾಜಂ—ಪೂಜ್ಯರೆ! ನಿಷ್ಕಾರಣವಾಗಿ ನನ್ನನ್ನು ತಮ್ಮ ಆಗ್ರಹಕ್ಕೆ ಗುರಿ ಮಾಡಬಾರದು! ತಾವು ಹೀಗೆ ರೂಪಾಂತರದಿಂದ ಬಂದುದನ್ನೂ, ನನ್ನ ಕುಮಾರಿಯು ಅದೃಶ್ಯವಾದುದನ್ನೂ ನೋಡಿದರೆ, ತಾವೇ ನನ್ನನ್ನು ಅನೇಕವಿಧದಿಂದ ಪರೀಕ್ಷಿಸುವಹಾಗಿದೆ! ಸರ್ವವಿಧದಲ್ಲಿ ಯೂ ತಮ್ಮ ಆಜ್ಞಾಧಾರಕನಾದ ನನ್ನಲ್ಲಿ ಪ್ರಸನ್ನರಾಗಿ ನನ್ನ ಕು ಮಾರಿಯನ್ನು ತೋರಿಸಿಕೊಡಬೇಕು. (ಎಂದು ನಮಸ್ಕರಿಸುವನು.)

ರಾಗ. ತಾಳ.

ಎಲೆಲೇ । ದುರುಳಾ । ಸಾಕೀನಟನವು । ಬಲ್ಲೆ ನಿನ್ನಾಟವನು ।
ನಿಲ್ಲಿಸೀ ನುಡಿಗಳನು । ಸೊಲ್ಲ ಮುರಿಯುವೆ ನಾನು ।
ಬುಲ್ಲನೆ ನೆಮ್ಮನು । ಲಲ್ಲೆಮಾತಿನಲಿ । ವಂಚಿಪೆಯಲ । ನೀನು ॥ ೧ ॥
ಛೀ ಛೀ । ಮೂರ್ಖಾ । ಯಾರೆಂದರಿಯುವೆ । ನಾರದನಲ್ಲವೆ ನಾನು ।
ತೋರುವೆನೆನ್ನಯ ತಪದ । ಸಾರವನೆಲ್ಲವ ನಿನಗೆ । ಕ್ರೂರನೆ ನಿನ್ನಯ ।
ಮೀರಿದ ಗರ್ವಕೆ । ಫಲವನು ನೋಡೀಗ ॥ ೨ ॥ ಛೀ । ಛೀ । ಮೂರ್ಖಾ ॥

ಪರ್ವತಂ—ಮಿತ್ರನೆ! ಕಪಟಿಯಾದ ಇವನ ವಂಚನೆಗೆ ಈಗಲೇ ನಾವು ಫಲವನ್ನು ತೋರಿಸಬೇಕು.

ರಾಜಂ—ಪೂಜ್ಯರೆ! ತಮಗೆ ಅಷ್ಟುಶ್ರಮವೇಕೆ? ಮಹಾತ್ಮರಾದ ನಿಮ್ಮಂ ತವರ ವಿಷಯದಲ್ಲಿ ನಾನು ಅಪರಾಧಿಯಾಗಿದ್ದರೆ, ಆಕ್ಷಣವೇ ನನ್ನ ಕೈಯಲ್ಲಿರುವ ಈ ವಿಷ್ಣುಚಕ್ರವೇ ನನ್ನ ತಲೆಯನ್ನು ಸಹಸ್ರ ಭಾಗವಾಗಿ ಭೇದಿಸುತಿತ್ತಲ್ಲವೆ? ನಾನು ಮನಸ್ಸಾಕ್ಷಿಯಾಗಿ ನಿಮ್ಮಲ್ಲಿ ಅಪರಾಧಿಯಲ್ಲವೆಂಬುದು ನಿಜವಾಗಿದ್ದರೆ, ಈ ವಿಷ್ಣು ಚಕ್ರವೇ ತಮ್ಮ ಕೋಪಾಗ್ನಿಯಿಂದ ನನ್ನನ್ನು ರಕ್ಷಿಸಲಿ! ಪೂ ಜ್ಯರೆ! ಈಗಲೂ ಹೇಳುವೆನು. ನಿಜವಾಗಿ ನಾನು ಅಪರಾಧಿಯಲ್ಲ! ನಿಮ್ಮನ್ನು ವಂಚಿಸಬೇಕೆಂಬ ಉದ್ದೇಶದಿಂದ ನಾನು ಕಾಲಹರಣ ಮಾಡಿದವನಲ್ಲ! ನಾನು ನಿಮ್ಮ ಆಜ್ಞಾಧಾರಕನಾಗಿ, ನಿಷ್ಕಪಟ

ವಾದ ಹೃದಯದಿಂದ ನಿಮಗಾಗಿಯೇ ಈ ಸ್ವಯಂವರವನ್ನೇ ರ್ಪಡಿಸಿರುವಾಗಲೂ, ನೀವಿಬ್ಬರೂ ಹೀಗೆ ರೂಪಾಂತರದಿಂದ ಬಂದರೆ, ನಿಮ್ಮ ನಿಜಸ್ಥಿತಿಯನ್ನು ನಾನು ಹೇಗೆ ತಿಳಿಯಬಲ್ಲೆನು? ಈ ಸಂದರ್ಭದಲ್ಲಿ ನನ್ನ ಮಗಳನ್ನು ಯಾರೋ ಅಪಹರಿಸಿಕೊಂಡು ಹೋದುದಲ್ಲದೆ, ನಿಮ್ಮ ಕೋಪಕ್ಕೂ ಗುರಿಯಾದೆನು.

ನಾರದಂ—ಎಲೆ ವಾಚಾಲಕಾ! ಇರಲಿ! ನನ್ನ ಶಕ್ತಿಯನ್ನಾದರೂ ನೋಡು!

ಕಂ॥ ಮದುವೆಯನೆವದಿಂದೆಮ್ಮಂ
ಮುದವೇರಿಸಿ ಸುತೆಯ ತೋರಿ ವಂಚಿಪೆಯಲ! ನೀಂ।
ಇದೊ!ನೋಡೆನ್ನ ಪದಾಂಗು
ಷ್ಠದೆ ನೃಜಿಪೆಂ ನಿನಗೆ ಮೃತ್ಯುದೇವತೆಯೊಂದಂ.

(ಕಾಲಿಂದ ನೆಲವನ್ನು ಗುದ್ದಿದೊಡನೆ ಭಯಂಕರರೂಪವುಳ್ಳ ದೇವತೆಯು ನೆಲದಿಂದ ಮೇಲಕ್ಕೆದ್ದು)

ದೇವತೆ—(ನಾರದನಿಗೆ ತಲೆಬಗ್ಗಿ) ಮುನೀಂದ್ರಾ! ನನ್ನಿಂದಾಗಬೇಕಾದ ಕಾರ್ಯವೇನು?

ನಾರದಂ—ಎಲೆ ಮಾಯೆ! ಈ ರಾಜನು ನಮ್ಮನ್ನು ವಂಚಿಸಿರುವನು. ಇವನ ಸೇನಾಪರಿಕರಗಳನ್ನು ಧ್ವಂಸಮಾಡಿ, ಇವನನ್ನು ಬಂಧಿಸು!

ದೇವತೆ—ಮಹರ್ಷೀ! ನನ್ನ ಶಕ್ತಿಯನ್ನು ಕೇಳಬೇಕೆ! ಇದೋ!

ರಾಗ. ಹಂಸಧ್ವನಿ. ಆದಿತಾಳ.

ಇದೊ। ಪೋಗುವೆ। ಮದಿಸಿದ ರಾಜನ। ಮದವುಡುಗಿಸ॥ ಲಿದೊ! ಪೋಗುವೆ॥ ಅ॥
ವಿಧವಿಧದೀ। ಸದೆದವನಾ। ಪದಕೆರಗಿಸ॥ ಲಿದೊ! ಪೋಗುವೆ॥
ಉಗ್ರಕರಾಯುಧದಿಂದ। ಮುಗ್ಗುವ ರಿಪುಭಟವೃಂದ।
ದೊಗ್ಗನು। ನೆಗ್ಗಿಮ। ಹೋಗ್ರ। ರಣಾಗ್ರದೆ।
ಬಗೆಬಗೆಮಾಯೆಯ। ಮಿಗೆ ತೋರಿಸ। ಲಿದೊ! ಪೋಗುವೆ॥ ೧॥

ಫಡಫಡ ರಿಪುಗಳನೀಗ । ಕಡಿಕಡಿ ದೊಟ್ಟುತೆ ಬೇಗ ।
ಘುಡಿಘುಡಿ।ಸುತ ಧರೆ । ಗಡಗಡ।ನಡುಗ ುವೊ।
ಲೊಡನೊಡ । ನಡಿಯಿಡು । ತಲಿ ಬೇಗದಿ ॥ ನಿದೊ! ಪೋಗುವೆ ॥

(ಆರ್ಭಟಿಸುತ್ತ ।ರಾಜನಮೇಲೆ ಬೀಳುವುದಕ್ಕೆ ಬರುವಳು. ಚಕ್ರಾಯುಧವು ಮಾಯೆಯನ್ನು ಬೆನ್ನಟ್ಟುವುದು. ಮಾಯೆಯು ಚಕ್ರ ಜ್ವಾಲೆಗೆ ಹೆದರಿ ಹಿಂತಿರುಗಿ ಓಡಿಬಂದು) ಮಹರ್ಷೀ! ರಕ್ಷಿಸು! ಯಾವುದೋ ಅದ್ಭುತತೇಜಸ್ಸು ನನ್ನನ್ನು ದಹಿಸುತ್ತ ಬೆನ್ನಟ್ಟಿ ಬರುವುದು. (ನಾರದನನ್ನು ಮರೆಹುಗುವಳು.)

ನಾರದಂ—(ಮುಂದೆ ನೋಡಿ)ಓಹೋ! ಇದು ವಿಷ್ಣುಚಕ್ರದ ತೇಜಸ್ಸು! ಇದು ನಮ್ಮನ್ನೇ ದಹಿಸುತ್ತಿರುವುದಲ್ಲಾ! ಇನ್ನೇನು ಗತಿ! ಪರ್ವತಾ! ಈಗ ಮಾಡುವುದೇನು!

ಪರ್ವತಂ—ಮಾಡುವುದೇನು? ನಾವು ನಿರ್ಭಯವಾದ ವಿರಕ್ತಿಮಾರ್ಗದಿಂದ ದಾರಿತಪ್ಪಿ ಕಾಮಮಾರ್ಗದಲ್ಲಿ ಸಿಕ್ಕಿದಮೇಲೆ, ಅದರಿಂದುಂಟಾಗುವ ಅನರ್ಥಗಳಿಗೆಲ್ಲಾ ಗುರಿಯಾಗಲೇ ಬೇಕು. ಸ್ವಯಂಕೃತಾಪರಾಧಕ್ಕೆ ತಕ್ಕಫಲವು ತೋರುತ್ತಿರುವುದು. ಆಶಾಭಂಗವೊಂದು! ಅವಮಾನವೊಂದು! ಕೊನೆಗೆ ಪ್ರಾಣಾಂತಕರವಾದ ಈ ಅನರ್ಥವೂ ಬಂದೊದಗಿತು.

ನಾರದಂ—ರಾಜನು ನಿಜವಾಗಿ ಅಪರಾಧಿಯಾಗಿದ್ದಪಕ್ಷದಲ್ಲಿ, ಈ ವಿಷ್ಣುಚಕ್ರವು ಅವನಿಗೆ ಸಹಾಯವಾಗಿ ನಮ್ಮನ್ನು ಬಾಧಿಸುತ್ತಿರಲಿಲ್ಲ. ಬೇರೆಯಾರೋ ಮಾಯಾವಿಗಳಿಂದ ಈ ಕಾರ್ಯವು ನಡೆದಿರಬೇಕು.

ಪರ್ವತಂ—ಹಾಗಿದ್ದರೆ ಈಗ ನಾವು ಈ ರಾಜನಲ್ಲಿಯೇ ಶರಣಾಗತರಾಗುವುದು ಮೇಲೆಂದು ತೋರುವುದು.

ನಾರದಂ—ನಿಜ! ಹಾಗೆಯೇ ಮಾಡುವೆವು.

(ನಾರದಪರ್ವತರೂ, ಮಾಯೆಯೂ ಕೈಮುಗಿದು ನಿಲ್ಲುವರು.)

ನಾರದಂ—ರಾಜೇಂದ್ರಾ! ನಾವು ತಿಳಿಯದೆ ಮಾಡಿದ ತಪ್ಪನ್ನು ಮನ್ನಿಸಿ ನಮ್ಮನ್ನು ಈ ಚಕ್ರತಾಪದಿಂದ ರಕ್ಷಿಸಬೇಕು.

(ಎಂದು ಕಾಲಮೇಲೆ ಬೀಳುವುದಕ್ಕೆ ಹೋಗುವರು.)

(ಅವರನ್ನು ಕೈಹಿಡಿದೆತ್ತಿ) ಪೂಜ್ಯರೆ! ಸರ್ವಲೋಕಪೂಜಿತರಾದ ನೀವು ನಿಮ್ಮ ಪಾದಸೇವಕನಾದ ನನಗೆ ನಮಸ್ಕರಿಸುವುದರಿಂದ ನನ್ನನ್ನು ದೋಷಕ್ಕೆ ಗುರಿಮಾಡಬೇಡಿರಿ!

ರಾಜಂ—ಪೂಜ್ಯರೆ! ಈ ಚಕ್ರಕ್ಕೆ ನಾನು ಅಧೀನನೇಹೊರತು ಇದು ನನ್ನ ಅಧೀನವಲ್ಲ. ಆ ಶ್ರೀಹರಿಯ ಸಂಕಲ್ಪಾನುಸಾರವಾಗಿ ಅದು ನಡೆಯುತ್ತಿರುವುದೇ ಹೊರತು, ಅದನ್ನು ತಡೆಯುವುದಕ್ಕಾಗಲಿ, ಬಿಡುವುದಕ್ಕಾಗಲಿ ನಾನು ಶಕ್ತನಲ್ಲ! ಆದರೆ ನನ್ನ ಮನೆಗೆ ಅತಿಥಿಗಳಾಗಿ ಬಂದ, ನೀವು ಈ ಅಪಾಯಕ್ಕೆ ಗುರಿಯಾಗದಂತೆ, ನಾನೇ ನಿಮಗಾಗಿ ಆ ಭಗವಂತನನ್ನು ಪ್ರಾರ್ಥಿಸುವೆನು.

(ಎಂದು ಕೈಮುಗಿದು ನಿಂತು ಪ್ರಾರ್ಥಿಸುವನು)

ರಾಗ. ತಾಳ.

ದೇವದೇವ | ದಯಾನಿಧೇ | ಸುಜನಪಾಲ | ಶ್ರೀನಿಧೇ |
ಪಾವನಾತ್ಮ | ವೈಭವಾ | ಪಾಲಿಸೈ ಕೃ | ಪಾರ್ಣವಾ ||
ಕನ್ಯೆಯನ್ನು | ನಾನಗಲಿ | ಖಿನ್ನಮಾನಸನಾಗಿರೆ |
ಮಾನ್ಯರಾದ | ಮೌನಿವರಗ | ಕೋಪಕೀಡಾದೆನೇ ||
ದೀನಬಂಧೋ | ದಯಾಸಿಂಧೋ | ದಾನವಾರಿ | ಶ್ರೀಹರೀ |
ಮಾನದಿಂದ | ಪಾಲಿಸೆನ್ನ | ದೀನನಾಗಿ|ಬೇಡುವೆ ||

(ತೆರೆಯು ಒಡೆಯುವುದು. ಶ್ರೀಮತಿಯೊಡನೆ ಭಗವಂತನು ಪ್ರತ್ಯಕ್ಷನಾಗಿ)

ವಿಷ್ಣು—ಭಕ್ತೋತ್ತಮಾ! ಅಂಬರೀಷಾ! ನಿನ್ನ ಭಕ್ತಿಗೆ ಮೆಚ್ಚಿದೆನು. ನಿನ್ನ ಕುಮಾರಿಯ ವಿಷಯವಾಗಿ ನೀನು ಚಿಂತಿಸಬೇಕಾದುದಿಲ್ಲ! ಇದೋ! ನಿನ್ನ ಮಗಳು ಇಲ್ಲಿರುವಳು ನೋಡು! ಇವಳು ಪೂರ್ವ ಜನ್ಮದಲ್ಲಿ ತಪಸ್ಸಿನಿಂದ ನನ್ನನ್ನು ಮೆಚ್ಚಿಸಿ, ನಾನೇ ತನಗೆ ಪತಿ ಯಾಗಬೇಕೆಂದು ವರವನ್ನು ಪಡೆದಿರುವಳು. ಅದರಂತೆ ನಾನೇ ಅವಳನ್ನು ವರಿಸಿರುವೆನು. ನೀನು ಚಿಂತಿಸಬೇಡ!

ರಾಜಂ—ಪುರುಷೋತ್ತಮಾ! ಈಗ ನಾನು ನನ್ನ ಮಗಳವಿಷಯವಾಗಿ ಯೂ ಅಷ್ಟಾಗಿ ಚಿಂತಿಸುವವನಲ್ಲ. ನನ್ನ ಮನೆಗೆ ಅತಿಥಿಗಳಾಗಿ

ಬಂದ ಈ ಮಹರ್ಷಿಗಳು, ನನ್ನನ್ನು ಅಪರಾಧಿಯೆಂದು ತಿಳಿದು ಕುಪಿತರಾಗಿರುವರು. ನೀನು ಅವರ ಸಂದೇಹವನ್ನು ನೀಗಿಸಬೇಕಲ್ಲದೆ, ಈ ಚಕ್ರವು ಇವರಿಗೆ ಯಾವ ಅಪಾಯವನ್ನೂ ಉಂಟುಮಾಡದಂತೆ ರಕ್ಷಿಸಬೇಕು

ವಿಷ್ಣು—ರಾಜೇಂದ್ರಾ ಇದೋ! ಆ ಚಕ್ರವನ್ನು ಪಸಂಹರಿಸಿಕೊಂಡೆನು. ಇವರಿಗೆ ನಿಜವಾಗಿಯೂ ಅಪಾಯವನ್ನುಂಟುಮಾಡಬೇಕೆಂಬುದು ನನ್ನ ಉದ್ದೇಶವಲ್ಲ! ಕಾಮಿಗಳು ಅನೇಕವಿಧದಲ್ಲಿ ಹಾಸ್ಯಾಸ್ಪದರಾಗುವರೆಂಬುದನ್ನು ಲೋಕಕ್ಕೆ ತೋರಿಸುವುದಕ್ಕಾಗಿ ನಾನು ಈ ಸಂವಿಧಾನಗಳನ್ನು ನಡೆಸಬೇಕಾಯಿತು. ಎಲೈ ನಾರದಪರ್ವತರೆ! ನಿಮ್ಮಲ್ಲಿ ರಾಜನು ಯಾವವಿಧದಲ್ಲಿಯೂ ಅಪರಾಧಿಯಲ್ಲ. ನೀವಿಬ್ಬರೂ ಕಾಮಮೋಹಿತರಾಗಿ, ಒಬ್ಬರನ್ನೊಬ್ಬರು ವಂಚಿಸಬೇಕೆಂಬ ಬುದ್ಧಿಯಿಂದ ನನ್ನಲ್ಲಿ ಪ್ರಾರ್ಥಿಸಿದಿರಿ! ನೀವು ನೀವು ಕೇಳಿದಂತೆ ನಾನು ವರವನ್ನು 'ಕೊಟ್ಟೆನು ಈಗನಿಮ್ಮಿಬ್ಬರ ಮುಖವೂ ವಾನರಭಲ್ಲೂಕಗಳಂತೆ ವಿರೂಪವಾಗಿರುವುದು ನಿಜವು. ಅದರಿಂದಲೇ ರಾಜನು ನಿಮ್ಮನ್ನು ನೋಡಿ ಭ್ರಮಿಸಬೇಕಾಯಿತು.

ನಾರದಂ—( ಬೆಜ್ಜರದಿಂದ ) ಏನು ನನ್ನಮುಖವೂ ವಿರೂಪವಾಗಿರುವುದೆ ?

ಪರ್ವತಂ—ನಾನು ಕಪಿಯಹಾಗೆ ಕಾಣುವೆನೆ ?

ವಿಷ್ಣು —ಹೌದು !

ಪರ್ವತಂ—ದೇವಾ ! ಹಾಗಿದ್ದರೆ ನಾವು ಈ ಅವಮಾನವನ್ನನುಭವಿಸಿ ಬದುಕಿರುವುದಕ್ಕಿಂತಲೂ, ನಿನ್ನ ಚಕ್ರಜ್ವಾಲೆಯಿಂದ ಆಗಲೇ ದಗ್ಧರಾಗಿದ್ದರೆ ಉತ್ತಮವಾಗಿದ್ದಿತು. ಇನ್ನುಮೇಲೆ ನಾವು ಭೂಮಿಯಲ್ಲಿ ನಾಚಿಕೆಯಿಲ್ಲದೆ ತಲೆಯೆತ್ತಿ ತಿರುಗುವುದು ಹೇಗೆ-! ಲೋಕದಲ್ಲಿ ನಮ್ಮಸ್ಥಿತಿಯು ಕೇವಲ ಹಾಸ್ಯಾಸ್ಪದವಾಯಿತು. ನಮ್ಮ ಶಾಪವೂ ಈ ರಾಜನಲ್ಲಿ ವಿಫಲವಾಯಿತು. ಇನ್ನು ನಮ್ಮನ್ನು ಯಾರು ಗೌರವಿಸುವರು ?

ವಿಷ್ಣು —ಓ ಮಹರ್ಷಿಗಳೇ ! ಈಗಲೂ ನಿಮ್ಮ ಗೌರವಕ್ಕೂ, ತಪಶ್ಶಕ್ತಿಗೂ ಏನೂ ಕೊರತೆಯಿಲ್ಲ. ನನ್ನ ಮಾಯೆಯು ಎಂತವರಿಗಾದರೂ ದುರತಿಕ್ರಮವು. ನಿಮ್ಮ ಯತ್ನವೇನಿದೆ ? ಇನ್ನುಮೇಲೆ ನೀವು ಮೊದಲಿನಂತೆಯೇ ಲೋಕಕ್ಕೆ ಜ್ಞಾನೋಪದೇಶಕರಾಗಿ ಸಂಚರಿಸಬಹುದು. ಈ ರಾಜನಲ್ಲಿ ನಿಮ್ಮ ಶಾಪವು ವಿಫಲವಾಯಿತೆಂದು ಹೇಳಿದಿರಲ್ಲವೆ? ಒಂದುವೇಳೆ ನಾನಾದರೂ ನಿಮ್ಮ ಶಾಪವನ್ನು ಪ್ರತಿಗ್ರಹಿಸುವೆನೇ ಹೊರತು, ಭಕ್ತನಾದ ಈ ಅಂಬರೀಷನ ಅಪಾಯವನ್ನು ಸಹಿಸಲಾರೆನು. ನಿಮ್ಮ ಗೌರವಕ್ಕೂ, ನಿಮ್ಮ ತಪಶ್ಶಕ್ತಿಗೂ ಇದರಿಂದ ಕುಂದಕವಿಲ್ಲವೆಂಬ ವಿಷಯದಲ್ಲಿ ಲೋಕಕ್ಕೆ ನಂಬಿಕೆಯುಂಟಾಗುವಂತೆ ನಾನೇ ನಿಮ್ಮ ಶಾಪಕ್ಕೆ ಗುರಿಯಾಗುವೆನು.

ನಾರದಂ—ನಮ್ಮ ಬುದ್ಧಿಮೋಹಕ್ಕೂ ನಿನ್ನ ಮಾಯೆಯೇ ಕಾರಣವೆಂದು ಹೇಳಿದೆಯಲ್ಲವೆ ? ನೀನೇ ನಮಗೆ ಈ ಮೋಹವನ್ನುಂಟು ಮಾಡಿ, ನಾವು ಕಾಮಿಸಿದ ಕನ್ಯೆಯನ್ನಪಹರಿಸಿದುದರಿಂದ, ನೀನೂ ಈ ಶ್ರೀಮತಿಯೊಡನೆ ಮನುಷ್ಯನಾಗಿ ಹುಟ್ಟಿ, ಈ ನಿನ್ನ ಪತ್ನಿಯನ್ನು ಬೇರೊಬ್ಬರು ಅಪಹರಿಸಿಕೊಂಡುಹೋಗುವುದರಿಂದ ನೀನು ಕೆಲವು ಕಾಲದವರಿಗೆ ನಮ್ಮಂತೆ ವಿಯೋಗದುಃಖವನ್ನನುಭವಿಸಬೇಕು. ನೀನು ನಮ್ಮಲ್ಲಿ ವಾತ್ಸಲ್ಯವುಳ್ಳವನಾಗಿ, ಈ ಶಾಪವನ್ನು ಪ್ರತಿಗ್ರಹಿಸಿದರೆ, ಲೋಕಕ್ಕೆ ನಮ್ಮಲ್ಲಿ ಗೌರವಬುದ್ಧಿಯು ತಪ್ಪಲಾರದು.

ವಿಷ್ಣು —ನಾರದಾ ! ಸಂತೋಷಪೂರ್ವಕವಾಗಿ ಪರಿಗ್ರಹಿಸುವೆನು. ನಾನು ಇದಕ್ಕೆ ಮೊದಲೇ ಲೋಕಕ್ಷೇಮಕ್ಕಾಗಿ ಮನುಷ್ಯರೂಪದಿಂದ ಅವತರಿಸಬೇಕೆಂದು ಸಂಕಲ್ಪಿಸಿದ್ದೆನು. ನಿನ್ನ ಶಾಪವು ಅದಕ್ಕೆ ಸಹಕಾರಿಯಾಗಲಿ! ಕೇಳು

ಸೀಸ|| ರಘುವಂಶದಲಿ ನಾನು | ರಾಮರೂಪದಿ ಪುಟ್ಟಿ |
ಸಕಲರಾಕ್ಷಸರನ್ನು | ಸಂಹರಿಪೆನು ||
ಜನಕಾತ್ಮಭವೆಯಾಗಿ | ಜನಿಸಿ ತೋರುವಳೀಕೆ |
ಧರೆಗೆ ಪಾತಿವ್ರತ್ಯಧರ್ಮಗಳಸು |
ಈ ಸುದರ್ಶನಚಕ್ರ | ವೆನ್ನ ಕೈಗಣೆಯಾಗಿ |
ದಶಕಂಠಕಂಠಭೇ | ದನಗೆಯ್ವುದು !
ನಿಖಿಲರಾಕ್ಷಸವಂಶ | ನಿರ್ಮೂಲನಕ್ಕೆ ತಾ |
ನೀಮಾಯೆ ಶೂರ್ಪಣಖಿಯಾಗಿ ಬಹಳು ||
ಗೀ|| ಸುರಮುನಿಪ ನಿನ್ನ ಶಾಪೋಕ್ತಿ ಸಕಲಧರೆಗೆ
ಪರಮಮಂಗಳಾವಹಮಾಗಿ ತೋರಿ ಮೆರೆಗೆ |
ವರಗುಣಾಗ್ರಣಿಯೀ ಯಂಬರೀಷನೃಪನಾ |
ನಿರುಪಮಯಶೋರಾಶಿ ಚಿರಕಾಲಮಾಳ್ಗೆ ನೆಲನಾ ||

ಎಲ್ಲರೂ—ದೇವಾ ! ಧನ್ಯರಾದೆವು.

ಮಂಗಳಂ

ಕ್ಷೀರಾಂಭೋಧಿ ವಿಹಾರ | ಭಕ್ತಾ | ಧಾರ ಭವಭಯತಾರಕಾ |
ಸಾರಸಲೋಚನ | ವಾರಣಮೋಚನ | ಶ್ರೀರಮಣೀ ಪರಿತೋಷಕಾ |
ವೀರ ಧೀರ ಗಂ | ಭೀರ ಸದಾಗಮ | ಸಾರ ನಿಜಾಶ್ರಿತಪಾಲಕಾ |
ಮಾರಜನಕ ವರ | ಕಾರಣಪೂರುಷ | ಪಾಲಿಸು ಜಗದಧಿ ನಾಯಕಾ||
ಕ್ಷೀರಾಂಭೋಧಿ ವಿಹಾರ.

ತೆರೆಯು ಬೀಳುವುದು.

ಇದು ಪಂಚಮಾಂಕವು.

ಶ್ರೀ ಶ್ರೀ ಶ್ರೀ